# ಹೆಸರಿಡದ

# ಕವನ ಸಂಕಲನ

ದಿ॥ ಡಾ॥ ಸಬಿತಾ ಮರಕಿಣಿ

ಸಂಪಾದಕರು : ಡಾ॥ ಎಂ.ಬಿ.ಮರಕಿಣಿ

ಸೃಜನ ಪ್ರಕಾಶನ,
ನಂ. 893/ಡಿ, 3ನೇ ಕ್ರಾಸ್,
ಪೂರ್ವ ಬಡಾವಣೆ ನೆಹರು ನಗರ
ಮಂಡ್ಯ

" HESARIDADA KAVANA SANKALANA "- A collection of poems By :Dr. Sabitha Marakini.

**Published by :**

**Shrujana Prakashana,** No. 893/D 3rd Cross Eastern Extension Neharu Nagar. **Mandya**- PIN-571401.
**Mobile** No: 9448930173



First impression : 2013
Page : 220
Price : Rs. 270.00
70 GSM N.S. Maplitho - 1/8 Demy

ಹೆಸರಿಡದ ಕವನ ಸಂಕಲನ
ಲೇಖಕರು : ಡಾ॥ ಸಬಿತಾ ಮರಕಿಣಿ
ಪ್ರಥಮ ಮುದ್ರಣ : 2013
ಪುಟ ಸಂಖ್ಯೆ : 220
ಬೆಲೆ : 270.00

ಮುಖಪುಟ : ಹರೀಶ್ ಕುಮಾರ್

ವಿಶೇಷ ಸಹಕಾರ
ಮರಕಿಣಿ ಗುರಿಕಾರ ಟ್ರಸ್ಟ್ (ರಿ)
ಅಡ್ಯನಡ್ಕ ದ.ಕ.ಜಿಲ್ಲೆ

Special Assistant
Marakini Gurikaara Trust (R)
Adyanadka BANTVAL TQ
DAKSHINA KANNADA

ಸಂಪರ್ಕ ವಿಳಾಸ
ಡಾ॥ ಎಂ.ಬಿ.ಮರಕಿಣಿ
ಗ್ರಾಮೋದಯ
# 36, ಆಶ್ರಯ ಅಪಾರ್ಟ್‌ಮೆಂಟ್ ವಿನಾಯಕ ಲೇಔಟ್
ವಿಜಯನಗರ ಬೆಂಗಳೂರು – 40
ಮೊ:9845277977

Printed at :
ಶ್ರೀರಾಮ ಪ್ರಿಂಟರ್ಸ್ ಮಂಡ್ಯ
ಮೊ : 9448930173

# ಪರಿವಿಡಿ


1. ನಿವೇದನೆ – 09
2. ಸಮರ್ಪಣೆ – 13
3. ಮುನ್ನುಡಿ – 1
   ಕಯ್ಯಾರ ಕಿಞ್ಞಣ್ಣರೈ – 15
4. ಮುನ್ನುಡಿ – 2
   ಪ್ರೊ॥ ವಸಂತ ಕುಷ್ಟಗಿ ಎಂ.ಎ; ಡಿ.ಲಿಟ್ –19
5. ಮುನ್ನುಡಿ – 3
   ಡಾ. ವಸಂತಕುಮಾರ ಪೆರ್ಲ – 34
6. ಮುನ್ನುಡಿ – 4
   ಸುಬ್ರಾಯ ಚೊಕ್ಕಾಡಿ – 38
7. ಮುನ್ನುಡಿ – 5
   ಡಾ. ರಮಾನಂದ ಬನಾರಿ – 44

1. ಯೌವನಕ್ಕೆ ಆಹ್ವಾನ – 49
2. ಮಲ್ಲಿಗೆಯ ಸೌಭಾಗ್ಯ – 50
3. ಗಾಳಿಯೊಡನಾಟ – 51
4. ಬೆಟ್ಟ – ಸಾಗರ – 52
5. ಹುಚ್ಚು ಮನಸ್ಸು – 53
6. ತೃಪ್ತಿ – ಸಂತೃಪ್ತಿ – 54
7. ಕಾಯಕ – 55
8. ಭಾಗ್ಯಲಕ್ಷ್ಮಿಯ ಚೇಷ್ಟೆಗೆ – 56
9. ಕರೆಯ ಬಂದವರು – 58
10. ಕೊನೆಯ ಲೆಕ್ಕ – 59
11. ಈ ಮರ ಮಾಮರ – 60
12. ಹೋರಾಡುತ್ತಲೇ ಸಾಗು – 62
13. ಗಿಲಿ ಗಿಲಿ ಗೆಜ್ಜೆಯ ನಾದ – 63
14. ಜಾತ್ರೆಗೆ ಬಾಳೇ ಗೆಳತಿ – 64
15. ಮುಗ್ಧ ಮಕ್ಕಳು – 66
16. ವಧುವಾಗಿದ್ದಾಳೆ ಮಗಳು – 67
17. ಗಾಳಿ ಹೇಳಿದ ಚಾಡಿ – 68
18. ವರುಣ ಸಂತಾನ – 70
19. ಗ್ರಾಮ ಪಂಚಾಯಿತಿ –
    ಮೀಸಲಾತಿ – 72
20. ಕೆರೆ ಹೂಳಿದ ಕೂಳು – 74
21. ಚಂದ ಮಾಮ –
    ಓ ಚಂದಮಾಮ – 77
22. ನಮ್ಮ ದೇಶ ಭಾರತ – 80
23. ಹೊಸ ಕನಸು ಬೇಕು – 89
24. ಮುನಿದ ನಲ್ಲೆಗೆ – 90
26. ಕಾಗೆ / ಕೋಗಿಲೆ – 91
27. ಕುಡುಕನ ಬದುಕು – 93
28. ಮಳೆಯ ಸೊಬಗು – 94
29. ವಸಂತಾಗಮನ – 96
30. ಕಳೆದಿದೆ ಚೇತನ – 97
31. ಯಾರಿದ್ದೀರಿ ಒಳಗೆ – 98
32. ಬೇಡುತಿಹೆ ವರವ – 99
33. ನಾನೊಂದು ಹೆಣ್ಣು – 100
34. ನನ್ನ ಪಯಣ – 101
35. ನನ್ನ ಮುದ್ದಿನ ಕಂದ – 102
36. ಮರಳರಾಶಿಯಲ್ಲೊಂದು ಕಣ – 104
37. ನಿನಗೇನು ಬೇಕು – 105
38. ನಡೆದ ದಾರಿ – 106
39. ಹೃದಯ ಭಾರ – 107
40. ಸಾಗರದ ಸೊಗಸು – 108
41. ಮಡಿಲ ತುಂಬಿದ ಗಿಡ – 110

42. ನನ್ನ ಕವನಗಳು – 111
43. ಕನಸಿನಲಿ ಕಂಡದ್ದು – 112
44. ಸಪ್ತಪದಿ ತುಳಿದಾಗ – 113
45. ದೇಹದೊಳಗಿದ್ದದ್ದು – 114
46. ಹರುಕು ಬಾಯಿ ರಂಗ – 115
47. ಬಸ್ಸು ಮೊಗಚಿತು – 117
48. ದೇವರೇ , ನೀನು ಯಾರು? – 118
49. ಈ ಬದುಕು – 119
50. ಒಂದು ಜೀವಿಯ ಸದ್ಗತಿ – 119
51. ಕಾನನದ ಮರ – 120
52. ಹೃದಯ ಚೋರ – 121
53. ಚಿತ್ರಕಾರ – 122
54. ಯುಗ ಯುಗಾದಿ ಬಂತಂತೆ – 123
55. ಕವಿತೆ ಬರೆದ ಕವಿಗೆ – 124
56. ಬಸುರಿಂದ ಬಂದವರು – 126
57. ದೇವರು – 127
58. ಬಡತನವ ಕೊಡು ಎನಗೆ – 127
59. ನಿನ್ನಾಟವು – 128
60. ಹೊಸ ಕನಸಿಗೆ ಕರೆ – 129
61. ನೀನು – ನಾನು – 130
62. ನಗರದ ಬದುಕು – 131
63. ಬಯಸಿದ ಸಾಮ್ರಾಜ್ಯ – 132
64. ನಾನಿಲ್ಲಿ ಸುಖಿ – 133
65. ನನ್ನೂರ ನೆನಪು – 134
66. ಬಾಳ ನಡಿಗೆ – 135
67. ಮುಗುಳು ಮಲ್ಲಿಗೆ – 135
68. ಹೊಸ ವರುಷ – 136
69. ಕಿರು ತೊರೆ – 137
70. ಸಾಗರ – 138
71. ಭೀಕರ ಕನಸು – 139
72. ನನ್ನ ಕೊರಗು – 139
73. ಭಾವ ಜೀವನ – 140
74. ಜೀವನದಿ – 141
75. ನನ್ನ ಮುದ್ದಿನ ಕಂದ – 142
76. ಹೆದರಿಕೆ – 143
77. ನನ್ನ ಪಯಣ – 143
78. ದೇವನ ಇರವು – 145
79. ನನ್ನ ನಡೆ – 146
80. ಜ್ಞಾನ ದಾಹ – 147
81. ಮಲೆನಾಡ ಸೊಗಸು – 148
82. ಬದುಕು – 149
83. ಆಸೆಗಳು – 150
84. ಭಾವನೆಗಳು – 151
85. ಕಾಡುವುದೇಕೆ ದೇವನನು – 152
86. ಆಸರೆ – 153
87. ಅರ್ಥ–ಅಪಾರ್ಥ – 154
88. ಏನಿದ್ದರೆ ಚೆನ್ನ – 155
89. ವೇದನೆ – 157
90. ಅದೃಶ್ಯ ಮರಣ – 158
91. ಕವಿ – 159
92. ಪುಟ್ಟ ಹಕ್ಕಿ – 161
93. ಬೆಳಕು – 162
94. ಒಂದೇ ದಿನದ ಶಿಶುವು – 163
95. ಮೀರುತ್ತಿರುವ ವಯಸ್ಸು – 165
96. ನವ ಜ್ಯೋತಿ – 166
98. ಉದುರುವ ಹಲ್ಲುಗಳು – 168
99. ಕಾನನದ ಮರ – 169
100.ಉದಾಸೀನ – 170
101. ಭೂತಾಯಿ ಚಕ್ಕಂದ – 172
102.ಅಮ್ಮ – 173
103.ನಾನು ಬೇಡುವುದಿಲ್ಲ – 175
104.ಏನು ಬೇಡಲಿ ನಿನ್ನ – 177
105.ಶಾಂತಿಯೆಲ್ಲಿ – 178
106.ಪ್ರಕೃತಿ ಮಾತೆಯೇ ಪರಮಗುರು ಎನಗೆ – 179
107.ಸಂಸಾರ ಸೊಡರು – 180
108.ಅಂತರಾತ್ಮನ ಗೋಳು – 181

| | | |
|---|---|---|
| 109. ಸುಂದರ ವೃಕ್ಷ | – | 183 |
| 110. ಹಾವು ನೋವು | – | 184 |
| 111. ಸ್ವಾತಂತ್ರ್ಯ ಪಕ್ಷಿ | – | 186 |
| 112. ಬದುಕು ಬಂಗಾರ | – | 187 |
| 113. ಮಲೆನಾಡು | – | 188 |
| 114. ದೇಹ | – | 190 |
| 115. ಹಾಗೂ ಹೀಗೂ | – | 191 |
| 116. ಗೋರಿ | – | 193 |
| 117. ನಾನು | – | 194 |
| 118. ಕಾತರ | – | 196 |
| 119. ಇವರು ಮಕ್ಕಳು | – | 197 |
| 120. ನೇರದಾರಿ | – | 198 |
| 121. ನಿತ್ಯವಧು | – | 199 |
| 122. ಓ ಬೆಳಕೆ | – | 200 |
| 123. ಊರುಗೋಲು | – | 201 |
| 124. ವಸಂತ ಬಂತು | – | 202 |
| 125. ಮದುವೆ | – | 203 |
| 126. ಗಡಿಯಾರದ ಮುಳ್ಳು | – | 204 |
| 127. ಅಂತರಂಗ ಪೂಜೆ | – | 206 |
| 128. ವಿದಾಯ | – | 207 |
| 129. ಕನಸುಗಳು | – | 209 |
| 130. ಒಂದಾಸೆ | – | 211 |
| 131. ಹೊಂಗನಸು | – | 212 |
| 132. ಕತ್ತಲು – ಬೆಳಕು | – | 213 |
| 133. ನಾನೊಂದು ಮರ | – | 214 |
| 134. ನಿತ್ಯವೂ ಬಂದು ಹೋಗುವ ವಸಂತ | – | 216 |
| 135. ಸಪ್ತಪದಿ | – | 217 |
| 136. ನನ್ನ ನಡಿಗೆ | – | 218 |



ದಿ|| ಡಾ|| ಸಬಿತಾ ಮರಕಿಣಿ

(1935–2011)

# ಸಮರ್ಪಣೆ

ದಿವಂಗತ
ಡಾ॥ ಸಬಿತಾ ಮರಕಿಣಿಯವರ
ಸ್ವಚ್ಛಂದ ಪುಷ್ಪಗಳ
ಕಾವ್ಯೋದ್ಯಾನ
ಹೆಸರಿಡದ ಕವನ ಸಂಕಲನವೆಂಬ
ಈ ಕಾವ್ಯಗ್ರಂಥವು
ಪೂಜ್ಯರಾದ
ತಾಯಿ ಪರಮೇಶ್ವರಿ ಅಮ್ಮ
ತಂದೆ ಹಿಳ್ಳೇಮನೆ ಮಹಾಲಿಂಗಭಟ್ಟ
ಹಾಗೂ
ಅತ್ತೆ ಗೌರಮ್ಮ, ಮಾವ
ಮರಕ್ಕಿಣಿ ಗುರಿಕ್ಕಾರ ನಾರಾಯಣ ಭಟ್ಟರ
ಪವಿತ್ರ ಸ್ಮರಣೆಗೆ ಸಮರ್ಪಿತ

# ನಿವೇದನೆ

ಹದಿನೈದು ವರ್ಷಗಳ ಹಿಂದೆ (1999) 'ಹೆಸರಿಡದ ಕವನ ಸಂಕಲನ' ಎಂಬ ಕಿರು ಪುಸಕವೊಂದನ್ನು "ಗ್ರಾಮೋದಯ" ಪ್ರಕಟಿಸಿತು. 22 ಕವನಗಳಿರುವ ಈ ಸಂಕಲನ ಕವಯಿತ್ರಿ ಡಾ॥ ಸಬಿತಾ ಮರಕಿಣಿಯವರ ಮೊದಲ ಪುಸ್ತಕ 2004 ರಿಂದ 2010 ರವರೆಗೆ 3 ಕಾದಂಬರಿಗಳನ್ನು, ಒಂದು ಕಥಾ ಸಂಕಲನವನ್ನು ಹಾಗೂ ಒಂದು ನಾಟಕವನ್ನು ಡಾ॥ ಸಬಿತಾ ಮರಕಿಣಿಯವರು ಬರೆದಿದ್ದು ಪ್ರಕಟವಾಯಿತು. ಈ ಕೃತಿಗಳು ಎಂದರೆ ಗದ್ಯ ಸಾಹಿತ್ಯ ಪುಸ್ತಕಗಳು ಹವಿಗನ್ನಡ ಎಂದರೆ ಹವೀಕ ಭಾಷೆಯಲ್ಲಿ ಬರೆದ ಕೃತಿಗಳು. ಹವಿಗನ್ನಡದ ಮೊದಲ ಕಾದಂಬರಿ ಕಾರ್ತಿ ಎಂಬ ಪ್ರಶಂಸೆಗೂ 'ಹವಿಗನ್ನಡ ಶ್ರೀ ಸೂರಿ' ಪ್ರಶಸ್ತಿ ಎಂಬ ಸನ್ಮಾನಕ್ಕೂ ಪಾತ್ರರಾದರು. ಈ ಕೃತಿಗಳನ್ನು ಬಹು ಹಿಂದೆಯೆ ಬರೆಯಬೇಕೆಂದು ಟಿಪ್ಪಣಿ ಮಾಡಿಕೊಂಡಿದ್ದರೂ ಅವುಗಳನ್ನೂ ಪುಸ್ತಕ ರೂಪದಲ್ಲಿ ರಚಿಸಲು ದೀರ್ಘಕಾಲ ಹಿಡಿಯಿತು ಎಂದು ಹೇಳಬಹುದು. ಜನಪ್ರಿಯ ವೈದ್ಯೆಯಾಗಿದ್ದುದರ ಜೊತೆಗೆ ಹರಿಜನ ಗಿರಿಜನ ಮೊದಲಾದ ಸಮಾಜದ ತೀರ ಕೆಳಸ್ತರದಲ್ಲಿ ಇದ್ದ ದೀನ ದಲಿತರ ಸಮಗ್ರವಿಕಾಸ ಕಾರ್ಯಕ್ರಮದ ಮೂಲಕ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡು ಗುಲ್ಬರ್ಗ ಜಿಲ್ಲೆಯ ಕಮಲಾಪುರ, ಮೈಸೂರು ಜಿಲ್ಲೆಯ ಎಚ್.ಡಿ. ಕೋಟೆ, ತೆಲಂಗಾಣ ಭಾಗದ ಪಡಕ್ಕಲ್ ಮೊದಲಾದ ನಾನಾ ಸ್ಥಳಗಳಲ್ಲಿ ಅವಿಶ್ರಾಂತವಾಗಿ ದುಡಿಯುತಿದ್ದರು. ಜೊತೆಗೆ ಹಿಂದುಳಿದ ಭಾಗವಾದ ಚಿತ್ತಾಪುರದಲ್ಲಿ ಶಿಕ್ಷಣ ಸಂಸ್ಥೆಯನ್ನೂ ಪ್ರಾರಂಭಿಸಿದರು. ಅಲ್ಲಿ ಮಹಿಳಾ ಸಂಘಟನೆ, ನಗರ ಸಭೆಯ ಸದಸ್ಯತ್ವ ಹಾಗೂ ಸುಲಭ ವೆಚ್ಚದ ಚಿಕಿತ್ಸಾಲಯ (ಮೈಸೂರು ದವಾಖಾನೆ) ಇಂತಹ ಬಹುಮುಖ ಕ್ಷೇತ್ರಗಳಲ್ಲಿ ಸುಮಾರು ಐದು ದಶಕಗಳ ಕಾಲ ದುಡಿದು ಕೊನೆಗೆ 2003ರಲ್ಲಿ ವಿಶ್ರಾಂತ ಜೀವನಕ್ಕೆ ಕಾಲಿರಿಸಿದರು. ಬಾಳ ಸಂಜೆಯ ದಿನಗಳನ್ನು ಕಳೆಯಲು ಅವರ ಆಯ್ಕೆಯ ಸ್ಥಳ ಗ್ರಾಮಾಂತರ ಬೆಂಗಳೂರಿನ ನೆಲಮಂಗಲದ ಬಳಿಯ ಅರಸಿನ ಕುಂಟೆ ಗ್ರಾಮದ ಒಂದು ಚಿಕ್ಕ ಹಳ್ಳಿ (ಆದರ್ಶನಗರ) ಇಲ್ಲಿ ಒಂದು ಸ್ವ-ಗೃಹ, 'ಮಾನಸ'ವನ್ನು ನಿರ್ಮಿಸಿ ಬಾಳಸಂಜೆಯ ದಿನಗಳನ್ನು ಕಳೆಯಲು

ಮುಂದಾದರು. ಇಬ್ಬರು ಮಕ್ಕಳು, 4 ಜನ ಮೊಮ್ಮಕ್ಕಳಿದ್ದು, ಎಲ್ಲರೂ ತಮ್ಮ ತಮ್ಮ ವೃತ್ತಿ – ಶಿಕ್ಷಣಗಳಲ್ಲಿ ಕಾರ್ಯೋನ್ಮುಖರಾಗಿದ್ದು, ಜೀವನದ ಹೆಚ್ಚಿದ ಜವಾಬ್ದಾರಿಯನ್ನೂ ನಿಭಾಯಿಸಿದ್ದರು. ತಮ್ಮ ವೈವಾಹಿಕ ಜೀವನದ 47 ವಸಂತಗಳನ್ನೂ, ಶಿಶಿರ ದಿನಗಳನ್ನೂ, ಜತೆಯಾಗಿ ಬದುಕುತ್ತಿದ್ದ ಪತಿ ಡಾ॥ ಎಮ್.ಬಿ ಮರಕಿಣಿಯವರೂ ತಮ್ಮ ಬಹುವಿಧ, ಬಹುಮುಖ ಚಟುವಟಿಕೆಗಳಿಂದ ತಕ್ಕಷ್ಟು ಬಿಡುವು ಮಾಡಿಕೊಂಡು ವಿಶ್ರಾಂತಿ ಜೀವನವನ್ನು ಸವಿಯಲು ಅನುವು ಮಾಡಿಕೊಟ್ಟರು.

ಹೀಗೆ, ಸಾಕಷ್ಟು ಬಿಡುವು, ಆಹ್ಲಾದಕರವಾದ ಗ್ರಾಮೀಣ ಪರಿಸರ, ಸುತ್ತ ಮುತ್ತ ಸ್ನೇಹಮಯಿ 'ಬಂಧು ಬಳಗ' ಇದ್ದುದು ಡಾ। ಸಬಿತಾರವರ ಕವಿತಾ ಚೇತನಕ್ಕೆ ಹೊಸ ಆಯಾಮವನ್ನು ಒದಗಿಸಿತು. ಪರಿಣಾಮವಾಗಿ ಅಲ್ಲಲ್ಲಿ ಹಿಂದೆ ಗುಣಿ ಗುಣಿಸುತ್ತಿದ್ದ, ಗೀಚುತ್ತಿದ್ದ ಹಾಗೂ ಬರೆದಿಡುತ್ತಿದ್ದ ಕವಿತೆಗಳ ದೊಡ್ಡ ರಾಶಿ ಸೃಷ್ಟಿಯಾಯಿತು. (ಜಮೆಯಾಯಿತು ಎಂದು ಕೂಡಾ ಹೇಳಬಹುದು)

ಕೆಲವು ವರ್ಷಗಳ ಹಿಂದೆ "ಹೆಸರಿಡದ ಕವನ ಸಂಕಲನ"ವನ್ನು ಪ್ರಕಟಿಸಿದ ಕವಯಿತ್ರಿ ಮುಂದೆ ತಾನು ಬರೆದ ಕವಿತೆಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮಾಡಲೇ ಇಲ್ಲ ಎಂದು ಹೇಳಬೇಕಾಗಿದೆ. 'ಹೆಸರಿಡದ ಕವನ ಸಂಕಲನ' ದ ಹಲವಾರು ಕವಿತೆಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಶ್ರೀಮತಿ ಪ್ರೇಮಾ ರಾಮಮೂರ್ತಿ, ವಿಜಯಾ ರಘುನಾಥಭಟ್, ಹಿಮಾಭಟ್ ಮೊದಲಾದವರು ಹಾಡಿ ಶ್ರೋತೃಗಳ ಮನಸ್ಸನ್ನು ಉಲ್ಲಾಸಗೊಳಿಸಿದ್ದರು. (ಆದರ್ಶನಗರದ ಸಾಹಿತ್ಯ ಕಾರ್ಯಕ್ರಮಗಳಲ್ಲಿ). ಬೆಂಗಳೂರಿನ ಕಾರ್ಯಕ್ರಮವೊಂದರಲ್ಲಿ ಹಿರಿಯ ಗಾಯಕಿ ಶ್ರೀಮತಿ ಮಾಲತಿಶರ್ಮ, ಗಾಯತ್ರಿ ಪ್ರಕಾಶ್ ಮರಕಿಣಿ ಮೊದಲಾದವರು ಬೇರೆ ಬೇರೆ ಕಾರ್ಯಕ್ರಮಗಳಲ್ಲಿ ಸುಶ್ರಾವ್ಯವಾಗಿ ಹಾಡಿ ಕೃತಿಯ ಜನಪ್ರಿಯತೆಯನ್ನು ಹೆಚ್ಚಿಸಿದರು ಎನ್ನಬಹುದು. ವಿವಿಧ ಪತ್ರಿಕೆಗಳಲ್ಲಿ ಹಾಗೂ ನೇರಪತ್ರಗಳ ಮೂಲಕ ಕೂಡಾ ಕವನಗಳಿಗೆ ಪ್ರಶಂಸೆದೊರಕಿದೆ ಇನ್ನೂ ಒಂದು ವಿಶೇಷ ಅಂಶವೆಂದರೆ, ಆದರ್ಶ ನಗರದ ಗಣೇಶ ಸಭಾಂಗಣದಲ್ಲಿ ಜರುಗಿದ 'ಹೆಸರಿಡದ ಕವನ ಸಂಕಲನ'ದ ಕವಿ ಕಾವ್ಯ ಗೋಷ್ಠಿಯಲ್ಲಿ ಹಿರಿಯ ಸಾಹಿತಿ ಡಾ. ಎಚ್.ಎಸ್. ಗೋಪಾಲರಾವ್, ಮೊದಲಾದವರು ಕವಯಿತ್ರಿಯ ಸಾಧನೆಯನ್ನು ಮುಕ್ತಕಂಠದಿಂದ ಪ್ರಶಂಸಿದರು. ಈ ಕವನಸಂಕಲನಕ್ಕೆ ಮುನ್ನುಡಿಯನ್ನು ಬರೆದ ಹಿರಿಯ ಕವಿ ಕಯ್ಯಾರ ಕಿಂಞ್ಞಣ್ಣರೈ ಅವರು ಕಾಸರಗೊಡು (ಈಗ ಕೇರಳದಲ್ಲಿರುವ) ಕನ್ನಡ ನೆಲದಲ್ಲಿ ಜನ್ಮ ತಳೆದ (ನಾರಾಯಣ) ಈ ಕನ್ನಡತಿಯ ಸಾಹಿತ್ಯ ಕೈಂಕರ್ಯವನ್ನು ಪ್ರಶಂಸಿಸಿ ಆಶೀರ್ವದಿಸಿದ್ದರು ಎಂಬುದನ್ನು ಮರೆಯುವಂತಿಲ್ಲ.

ಇಷ್ಟೆಲ್ಲ ಗುಣಾಂಶಗಳಿದ್ದರೂ ತಾನು ಬರೆದ ನೂರಾರು ಕವಿತೆಗಳನ್ನು ಅಚ್ಚಿಸುವ ಪ್ರಯತ್ನ ಮಾಡಲೇ ಇಲ್ಲ ಎನ್ನಬವುದು. ಅಷ್ಟು ಮಾತ್ರವಲ್ಲದೆ ಡಾ॥ ಸಬಿತಾರವರು 'ಗೀಚಿದ' ತುಣಕುಗಳನ್ನೂ ಒಂದೆಡೆ ಸಂಗ್ರಹಿಸುವುದಾಗಲೀ, ಸಮರ್ಪಕವಾಗಿ ಕಾಯ್ದಿರಿಸುವುದಾಗಲೀ ನಡೆಯಲಿಲ್ಲ ಎಂಬುದೂ ನಿಜ. ಕಾರಣವೇನೇ ಇರಲಿ, ಇದು ದುರದೃಷ್ಟಕರ.

ಕೊನೆಗೊಂದು ಬಾರಿ ಸುಮಾರು 100 ಪುಟಗಳ ವ್ಯಾಪ್ತಿಯಲ್ಲಿ ಬರುವಷ್ಟು ಕವಿತೆಗಳನ್ನು ತಾವೇ ಆಯ್ಕೆ ಮಾಡಿ ಹಿರಿಯ ಸಾಹಿತಿ ಪ್ರೊ. ವಸಂತ ಕುಷ್ಟಗಿಯವರ ಪರಾಮರ್ಶೆಗೆ ಅದನ್ನು ಕಳುಹಿಸುವ ಅಪೇಕ್ಷೆಯನ್ನು ವ್ಯಕ್ತಪಡಿಸಿದ್ದರೂ ಅದೂ ಸಾಧ್ಯವಾಗಲಿಲ್ಲ.

ಈ ಎಲ್ಲ ಋಣಾತ್ಮಕ ಅಂಶಗಳ ಕೊನೆಯೋ ಎಂಬಂತೆ ಒಂದನೇ ದಿನಾಂಕ ಫೆಬ್ರವರಿ 2011 ರಂದು ಕವಯಿತ್ರಿ ಡಾ॥ ಸಬಿತಾ ಮರಕಿಣಿಯವರು ನಿಧನರಾದರು. ಮುಂದೆ ಆದರ್ಶನಗರದ ನಮ್ಮ 'ಮಾನಸ' ಮನೆಯನ್ನು ಮುಚ್ಚಿ ನನ್ನ ವಾಸ್ತವ್ಯವನ್ನು ಹಾಸನಕ್ಕೆ ಸ್ಥಳಾಂತರಿಸಬೇಕಾದ ಅನಿವಾರ್ಯತೆ ಉಂಟಾಯಿತು. (ಅಲ್ಲಿ ಮಗ ನಾರಾಯಣ ಭಟ್ ಆಕಾಶವಾಣಿಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕೆಲಸ ಮಾಡುತ್ತಿದ್ದ) 'ಮಾನಸ' ಮನೆಯ ವಸ್ತುಗಳನ್ನೆಲ್ಲಾ ಒಂದೆಡೆ ಜೋಡಿಸಿ ಇರಿಸುತ್ತಿದ್ದಾಗ ಕಣ್ಣಿಗೆ ಬಿದ್ದ ಡಾ॥ ಸಬಿತಾರವರು 'ಗೀಚಿ' ಇಡುತ್ತಿದ್ದ ಕವನಗಳ ದೊಡ್ಡ ಸಂಗ್ರಹ ದೊರಕಿತು. ಅದನ್ನು ಹಾಗೆಯೇ ಗಂಟು ಕಟ್ಟಿಕೊಂಡು (ದೊರಕಿದಷ್ಟನ್ನೂ ಜಮೆ ಮಾಡಿಕೊಂಡು) ಹಾಸನಕ್ಕೆ ಜತೆಯಲ್ಲಿ ಸಾಗಿಸಿದೆ. ಮುಂದೇನು? ಎಂಬ ಪ್ರಶ್ನೆ ನನ್ನ ಮುಂದೆ ಕಾಣಿಸಿತು. ಆಗ ನೆರವಿಗೆ ಬಂದವರು. ಸಿ.ಎಚ್. ಕೃಷ್ಣಶಾಸ್ತ್ರಿ, ಈ ಕವಿತೆಗಳನ್ನು ಅತ್ಯಂತ ತಾಳ್ಮೆ, ಆಸಕ್ತಿಗಳಿಂದ 4 ಸಂಪುಟಗಳಾಗಿ ವಿಂಗಡಿಸಿ ಬಹುದೆಂದು ಸೂಚಿಸಿದರು. ಅಷ್ಟೇ ಅಲ್ಲದೆ ಒಂದೊಂದು ಭಾಗವನ್ನು ಪರಿಶೀಲಿಸಲು ಸರ್ವಶ್ರೀ ಪ್ರೊ. ವಸಂತ ಕುಷ್ಟಗಿ, ಡಾ॥ ವಸಂತಕುಮಾರ್ ಪೆರ್ಲ, ಶ್ರೀ ಸುಬ್ರಾಯ ಚೊಕ್ಕಾಡಿ ಮತ್ತು ಡಾ॥ ರಮಾನಂದ ಬನಾರಿ ಇವರಿಗೆ ಒಂದೊಂದು ಸಂಪುಟವನ್ನು ಕಳುಹಿಸಿಕೊಟ್ಟೆ. ಎಲ್ಲ ಸಹೃದಯರು ಕಾಲ ವಿಳಂಬ ಮಾಡದೆ ಕವಿತೆಗಳನ್ನು ಅವಲೋಕಿಸಿ ಸಂಪುಟವನ್ನು ಅಚ್ಚುಕಟ್ಟಾಗಿ ಪೋಣಿಸಿ ಮುನ್ನುಡಿಯನ್ನೂ ಸಹ ಬರೆದುಕೊಟ್ಟು ಸಹಕರಿಸಿದರು.

ಈ ಕವಿತೆಗಳನ್ನು ಒಂದೇ ಸಂಪುಟವಾಗಿ (ಡಾ॥ ಸಬಿತಾ ಮರಕಿಣಿಯವರ ಕವಿತೆಗಳು ಎಂಬ ನೆಲೆಯಲ್ಲೇ) ಪ್ರಕಟಿಸುವುದು ಸೂಕ್ತವೆಂಬ ಸೂಚನೆ ಬಂತು ಹೀಗಾಗಿ ಕೈಯ್ಯಾರ ಕಿಂಞ್ಞಣ್ಣರೈ ಅವರು ಮುನ್ನುಡಿ ಬರೆದ ಮೊದಲನೆ ಸಂಪುಟದಿಂದ ತೊಡಗಿ ಈಗ ಸಂಗ್ರಹಿಸಲಾದ 4 ಸಂಪುಟಗಳನ್ನೂ ಸೇರಿಸಿ ಒಂದಾಗಿ ಅಚ್ಚಿಸಲು

ನಿರ್ಧರಿಸಿದೆ. ಮುಂದಿನ ಹೆಜ್ಜೆ ಎಂದರೆ ಹಸ್ತಲಿಖಿತ ಕವನಗಳನ್ನು ಡಿ.ಟಿ.ಪಿ ಅಕ್ಷರ ಜೊಡಣೆಗೆ ವರ್ಗಾಯಿಸುವುದು, ಅರ್ಥಾತ್ Proof reading ಇತ್ಯಾದಿ ದೃಷ್ಟಿದೋಷದ ನನ್ನ ಅಸಾಮರ್ಥ್ಯತೆಯನ್ನು ಹಿರಿಯ ಬಂಧುಗಳಾದ ಶ್ರೀ ನಾರಾಯಣ ಶ್ಯಾನುಭಾಗ, ಶ್ರೀ ಕೆ.ಪಿ. ರಾಜಗೋಪಾಲ ಕನ್ಯಾನ, ರಘುನಾಥ ಶೆಟ್ಟಿ, ಎಸ್.ಎನ್.ಮರಕಿಣಿ ಸಹೋದರರು, ಶಶಿಕಲಾ, ನಳಿನಿ ಮತ್ತು ನೆ.ಲ. ರಾಮಮೂರ್ತಿ ರಾ.ಸು.ವೆಂಕಟೇಶ, ಸಹಕಾರದಿಂದ ಈ ಕೆಲಸ ಸಾಧ್ಯವಾಯಿತು. ಈಗಾಗಲೇ ಪ್ರಕಟವಾಗಿರುವ ಡಾ॥ ಸಬಿತಾ ಮರಕಿಣಿಯವರ 'ಹೆಸರಿಡದ ಕವನ ಸಂಕಲನ' ಎಂಬ ಮೂಲ ಶೀರ್ಷಿಕೆಯನ್ನು ಈ ಸಂಗ್ರಹಕ್ಕೂ ಇರಿಸುವುದು ಸೂಕ್ತವೆಂದು ಭಾವಿಸಿದ್ದರಿಂದ ಹೊಸ 5 ಜನ ಮಹನೀಯರು ಬರೆದ ಪ್ರಸ್ತಾವನೆ ಹಾಗೂ ಮುನ್ನುಡಿಗಳನ್ನು ಈ ಸಂಪುಟದಲ್ಲೇ ಮುದ್ರಿಸಲಾಗಿದೆ. ನಾರಾಯಣ ಮಂಗಲದ ಡಾ. ಸಬಿತಾ ಮರಕಿಣಿ ಸ್ಮಾರಕ ಸಮಿತಿಯ ಅಧ್ಯಕ್ಷರಾದ ಡಾ.ಹರಿಕೃಷ್ಣ ಭರಣ್ಯ ಬೆನ್ನುಡಿ ಬರೆದು ಕೊಟ್ಟು ಸಹಕರಿಸಿದ್ದಾರೆ. ಈ ಕವನ ಸಂಕಲವನ್ನು ಪ್ರಕಟಿಸಿದ ಸೃಜನಪ್ರಕಾಶನಕೇ ವಂದನೆಗಳು ಹಾಗೂ ಶ್ರೀ ನಾರಾಯಣ ಕಂಗಿಲ ಇವರಿಗೂ ಋಣಿ.

ಐದು ಭಾಗಗಳಲ್ಲಿ ಇರುವ ಮುನ್ನುಡಿ, ಇದೇ ಸಂದರ್ಭದಲ್ಲಿ 'ಹೆಸರಿಡದ ಕವನ ಸಂಕಲನ' ವೆಂಬ ಶೀರ್ಷಿಕೆಯನ್ನು ಮೊದಲ ಬಾರಿಗೆ ಸೂಚಿಸಿದವರು ದಿ॥ ಶ್ರೀ ರಾಮಚಂದ್ರ ಉಚ್ಚಿಲ (ಚ,ರಾ) ಅವರ ಸೂಚನೆಯಂತೆ ಆಗ ಮುಖಪುಟಕ್ಕೆ ಸೂಕ್ತವಾದ ಚಿತ್ರವನ್ನು ಬರೆದುಕೊಟ್ಟವರು ಮಂಗಳೂರಿನ ಕಲಾದಿದ ಜಗದೀಶ ಅಮ್ಮುಂಜೆ  ಈ ಎಲ್ಲರ ಸಹಾಯ ಸಹಕಾರಕ್ಕೆ ಕೃತಜ್ಞತೆಗಳು. ಕೊನೆಯದಾಗಿ ಶ್ರದ್ಧಾಂಜಲಿಯ ನೆಲೆಯಲ್ಲಿ ಮತ್ತೊಮ್ಮೆ ನನ್ನ ನೆನಪಿನ ಕಾಣಿಕೆ ಇದು.

**ಡಾ॥ ಎಂ.ಬಿ. ಮರಕಿಣಿ**

ಬೆಂಗಳೂರು

(ಸಂಪಾದಕ)

# ಮುನ್ನುಡಿ – ೧

ಖ್ಯಾತ ವೈದ್ಯೆಯಾಗಿದ್ದೂ ದೇಶದ ನಾನಾಕಡೆಗಳಲ್ಲಿ ತೆಲಂಗಾಣ, ಕಲಬುರ್ಗಿ, ಮೈಸೂರು, ಬೆಂಗಳೂರು ಮುಂತಾದೆಡೆ ದಲಿತ ವರ್ಗದ ವಿಕಾಸಕಾರ್ಯಗಳಲ್ಲಿ ಮಹಿಳಾ ಸಂಘಟನೆ ಮತ್ತು ಶಿಶುವಿಹಾರ ಸಂಸ್ಥೆಗಳಲ್ಲಿ ಇಪ್ಪತ್ತೈದು ವರ್ಷಗಳಿಂದ ನಿರಂತರ ದುಡಿಯುತ್ತಿದ್ದು, ನೆದರ್‌ಲೇಂಡಿನ ಸೇವಾಸಂಸ್ಥೆಯ ಮನ್ನಣೆಗೂ ಪಾತ್ರರಾದ, ಎಳವೆಯಿಂದಲೂ ಕನ್ನಡ ಸಾಹಿತ್ಯದಲ್ಲಿ ವಿಶೇಷ ಆಸ್ಥೆವಹಿಸಿ ಲೇಖಿಕೆಯಾಗಿ ಕವಯಿತ್ರಿಯಾಗಿ ವನಸುಮದಂತೆ ಯಾರಕಣ್ಣಿಗೂ ಬೀಳದ ಡಾ. ಶ್ರೀಮತಿ ಸಬಿತಾದೇವಿ ಮರಕಿಣಿಯವರು ಇದೀಗ ಪ್ರಕಟಿಸುತ್ತಿರುವ ಹೆಸರಿಡದ ಕವನಸಂಕಲನಕ್ಕೆ ಮುನ್ನುಡಿ ಬರೆಯಲು ಅತೀವ ಸಂತೋಷಪಡುತ್ತೇನೆ. ಡಾ.ಸಬಿತಾದೇವಿ ಮರಕಿಣಿಯವರ ಗಂಡ ಡಾ. ಮಾಲಿಂಗಭಟ್ಟ ಮರಕಿಣಿಯವರು ನನಗೆ ಚಿರಪರಿಚಿತರು. ಕನ್ನಡಸಾಹಿತ್ಯ ರಂಗದಲ್ಲಿ ಬಹಳ ಹಿಂದೆಯೇ ಅವರು ಉತ್ತಮ ಕೃತಿಗಳನ್ನು ಬರೆದು ಪ್ರಕಟಿಸಿ ಖ್ಯಾತಿವೆತ್ತವರು. ಅವರು ವೈದ್ಯರಾಗಿಯೂ ಹೆಸರುವಾಸಿಯಾದವರು. ಇಂದು ವಿಶ್ವ ಆರೋಗ್ಯ ಸಂಸ್ಥೆಯ ವಿಶೇಷ ಕಾರ್ಯಕ್ರಮವೊಂದನ್ನು ನಡೆಸಲು ಬಿಹಾರಕ್ಕೆ ತೆರಳಿ ಡಾ.ರಾಜೇಂದ್ರಪ್ರಸಾದರ ಹುಟ್ಟೂರ ಭಾಗದಲ್ಲಿ ಸೇವಾನಿರತರಾಗಿರುವ ಅವರು ಸಾಹಿತ್ಯ ಸಂಸ್ಕೃತಿ, ಮತ್ತು ಜನಸೇವೆಯಲ್ಲೂ ಖ್ಯಾತಿವೆತ್ತ ಭಾಗ್ಯವಂತರು. ಅದಾಗಿ ಈ ಕವನಸಂಕಲನಕ್ಕೆ ಮುನ್ನುಡಿ ಬರೆಯುವುದು ನನಗೆ ಸಹಜವಾಗಿಯೇ ಸಂತೋಷನೀಡಿದೆ.

ಸಂಕಲನದಲ್ಲಿ ಇಪ್ಪತ್ತೆರಡು ಕವಿತೆಗಳಿವೆ. ಮಾನವ ಜೀವಿತದ ವಿವಿಧ ಭಾವನೆಗಳು, ಪ್ರಕೃತಿಸೌಂದರ್ಯ, ಕಾಯಕದ ಹಿರಿಮೆ, ಶೋಷಣೆಯ ಕಿರಿಮೆ ಮುಂತಾದ ವಿಷಯ ವಿಚಾರಲಹರಿಗಳಿಂದ ಕವನಗಳು ಅರ್ಥಗರ್ಭಿತವಾಗಿವೆ.

**ಬಟ್ಟಲಿನ ತಳಕಿರುವ**

**ಅಮೃತತೀರುವ ತನಕ**

**ಮುದಿತನವೆ ಹೋಗು ಹಿಂದಕ್ಕೆ**

**ಬರಬೇಡ ನನ್ನ ಸನಿಯಕ್ಕೆ**

ಎಂದು ಯೌವನವನ್ನು ಆಹ್ವಾನಿಸುವ ಕವನ ವಯೋಮಾನ ಏನೇ ಇರಲಿ ಜೀವನದ ಮಧುರಿಮೆಯನ್ನು ಆಸ್ವಾದಿಸುವ ನಿತ್ಯಚೈತನ್ಯವನ್ನು ಸ್ವಾಗತಿಸುತ್ತದೆ.

**ಅದೇ ಉತ್ಸಾಹ ಬದುಕಿನ ಆಶಾವಾದದ ಧಾಟಿಯಲ್ಲಿ**

**ಬೆಳಗಿನ ಜಾವದಿ ಮಲ್ಲಿಗೆ ಮುದುಡಿತು**

**ಹರ್ಷೋನ್ಮಾದದ ಮುದ ಸನ್ಮಾನದ**

**ಮಲ್ಲಿಗೆ ಹೂವಿನ ಸುಂದರ ಬಾಳಿನ**

**ಕಿರುಗಳಿಗೆಯ ಸೌಭಾಗ್ಯವೆ ಸಾಲದೆ**

**ನೆನಪನು ತಂಪಿಸಲು, ಬದುಕನು ಸೊಂಪಿಸಲು**

ಈ ಪಕ್ತಿಗಳೂ ಸಾಗುತ್ತವೆ. ಬದುಕು ಆನಂದಕ್ಕಾಗಿ ಎಂಬೀ ಮೂಲತತ್ವ ಈ ಪಂಕ್ತಿಯಲ್ಲಿ ವ್ಯಂಜಕವಾಗಿದೆ. ಕಾವ್ಯದಲ್ಲಿ ಆತ್ಮ ಧ್ವನಿ ಎಂದು ಆಲಂಕಾರಿಕರು ತಿಳಿಸಿದ್ದಾರೆ. ಅಂತಹ ಧ್ವನಿಪೂರ್ಣ ಭಾವನೆಗಳನ್ನು ನಾವಿಲ್ಲಿ ಕಾಣಬಹುದು, ಓದಿ ಮೆಲುಕು ಹಾಕಬಹುದು. ಇನ್ನೊಂದು ಕವಿತೆಯಲ್ಲಿ ಗಾಳಿ ರಭಸದಲ್ಲಿ ಬೀಸುವಾಗಲೂ ಮೈಯೊಡ್ಡಿದ್ದೇನೆ...... ಸುಳಿಗಾಳಿಯಲ್ಲಿ ಸುತ್ತಿತಿರುಗಿದ್ದೇನೆ. ತಂಗಾಳಿಯಲ್ಲಿ ಕಂಪಿಸಿ ನಡುಗಿದ್ದೇನೆ ಎಂದು ಪ್ರಕಟಿಸಿದ ಭಾವನೆಯೂ ಮಾನವ ಜೀವನದ ಏರಿಳಿತಗಳನ್ನು ಸಾಮರಸ್ಯದಿಂದ ಅನುಭವಿಸಿ ಆನಂದಿಸಬೇಕೆಂದು ಸೂಚಿಸುತ್ತದೆ. ಬೆಟ್ಟವೊಂದು ಸಾಗರದೊಡನೆ ಗೆಳೆಯನಾಗು ಎಂದಾಗ ಸಾಗರ ತನ್ನ ಆಳ, ವೈಶಾಲ್ಯ, ರತ್ನಗಳ ಆಕರಕ್ಕಾಗಿ ಗರ್ವಿಸಿ ನಿನ್ನಲ್ಲಿರುವುದೇನು ಮಣ್ಣು ಸೊಪ್ಪು ಎಂದು ಹೀನೈಸುವಾಗ ಬೆಟ್ಟ ನೊಂದುಕೊಂಡು ತನ್ನೆದೆಯ ನೀರ ಹೊನಲನ್ನೇ ತಾನು ಧಾರೆಯೆರೆದಿದ್ದೂ, ಈಗ ಅದು ಉಬ್ಬಿ ಕೊಬ್ಬಿ ತಿಂದ ಮನೆಗೇ ಕನ್ನವಿಕ್ಕುತ್ತದೆ ಎಂದು ಹೇಳುವ ಕವಿತೆ ಬದುಕಿನ ಬಹಿರಂಗ ಭಿನ್ನತೆಯಲ್ಲಿಯೂ ಐಕ್ಯವನ್ನು ಅಭಿವ್ಯಕ್ತಿಸುವ ಧ್ವನಿಯನ್ನು ಗುರುತಿಸಬಹುದು.

ನಿಸರ್ಗದ ಸೌಂದರ್ಯಸುಖಗಳನ್ನು ತಲ್ಲೀನತೆಯಿಂದ ತಿಳಿಸುವ ಕವಯಿತ್ರಿ ಕುಡಿಯಲು ಧಾರಾಳ ನೀರಿರುವ ನದಿ, ಸುಖನಿದ್ರೆಗೆ ಮರದನೆರಳು, ಸೆಕೆ ತಡೆಯಲು ಮಂದಮಾರುತ, ಹಾಡುವ ಹಕ್ಕಿ, ಬೆಳಗುವ ಚುಕ್ಕಿ, ಸಿಹಿ ಹಣ್ಣು, ದುಡಿಯಲು ರಟ್ಟೆ, ಹೀಗೆ ಬದುಕು ತನಗೆ ಕೊಟ್ಟದ್ದೆಲ್ಲ ಚಿನ್ನ ಬೆಳ್ಳಿ ಕಣಜ ಎನ್ನುತ್ತಾರೆ. ಕಾಯಕದ ಮಹತ್ವವನ್ನು ಪ್ರಾಣಿ ಜಂತುಗಳು ಅರಿತುಕೊಂಡು ಎಂತಹ ಸಂಕಷ್ಟ ಬಂದರೂ ರೇಶ್ಮೆ ಹುಳು ಮತ್ತೆ ಮತ್ತೆ ಗೂಡು ಕಟ್ಟುವುದು, ಗೂಡು ಕೊಯ್ದರೂ ಜೇನುನೊಣ ಪುನಃ ಜೇನು ಸಂಗ್ರಹಿಸುವುದು, ಗಂಧದ ಮರವನ್ನು ಕಡಿದು ಕೊರಡನ್ನು ತೇದು ಮುಗಿಸಿದರೂ ಪುನಃ ಗಂಧದ ಮರ ಬೆಳೆಯುವುದು ಇಂತಹ ಶ್ರದ್ಧೆ ಮನುಷ್ಯನಲ್ಲಿ

ಇದೆಯೆ? ಆತನಲ್ಲಿರುವುದು ಶೋಷಣೆಯಲ್ಲವೇ? ಎಂದು ನಿಟ್ಟುಸಿರಿಡುವ ಭಾವನೆ ಕಾಯಕದಲ್ಲಿದೆ.

ಭಾಗ್ಯಲಕ್ಷ್ಮಿಯನ್ನು ಮನೆಗೆ ಕರೆವ ಕವನ ದೀನದಲಿತರ ಆಕ್ರಂದನ. ಹೆಣ್ಣು ಬದುಕಿನನ ದಾಂಪತ್ಯ ಜೀವನದ ಭಗ್ನ ಸ್ವಪ್ನಗಳ ಅಭಿವ್ಯಕ್ತಿ 'ಈ ಮರ ಮಾಮರದ'ಲ್ಲಿದ್ದರೆ, ಜೀವನದಲ್ಲಿ ದುಃಖಿತೆಯಾದ ಗೆಳತಿಯನ್ನು ಸಾಂತ್ವನಗೊಳಿಸುತ್ತ ಏಳು ಧೈರ್ಯವ ತಾಳು. ಹೋರಾಡು ಬಾಳಿ ಬದುಕುವ ಹಕ್ಕು ನಿನಗೂ ಉಂಟು ಎಂದು ಸಮಾಧಾನಪಡಿಸುವುದು ಮತ್ತೊಂದು ಕವನದಲ್ಲಿದೆ. ಸುಂದರವಾದ ಒಂದು ಪ್ರಕೃತಿ ಪ್ರತಿಬಿಂಬವಿದ್ದಂತೆ ಇರುವ ಗೆಜ್ಜೆಯ ನಾದದ ಗಿಲಿಗಿಲಿ. ಎತ್ತುಗಳ ಅಂಥ ವಿಧೇಯತೆಯ ದ್ಯೋತಕವಾಗಿದೆ. ಗೆಳತಿಯೊಬ್ಬಳನ್ನು ಆಕೆಯ ಸಖಿ ಜಾತ್ರೆಗೆ ಬಾರೆ ಗೆಳತಿ ಗೀತೆಯಲ್ಲಿ ಆಹ್ವಾನಿಸುತ್ತ ಜಾತ್ರೆಗೆ ಬರುವ ತನ್ನಿನಿಯನನ್ನೂ ತೋರಿಸುವೆ ಎನ್ನುತ್ತ ತನ್ನ ಹರ್ಷವನ್ನು ಹಂಚಿಕೊಳ್ಳಲು ಹವಣಿಸುವ ತವಕ ಸ್ತ್ರೀಹೃದಯದ ಮುಗ್ಧ ಮನಸ್ಸನ್ನು ತೆರೆದಿಡುತ್ತದೆ. ವಧುವಾದ ಮಗಳು ಮಂಗಳಗೌರಿ, ಶೃಂಗಾರಗೊಂಡು ಮುದ ಬೀರುತ್ತ ಹೊಸ ಬದುಕನ್ನು ಇನ್ನಷ್ಟು ಆಪ್ಯಾಯಮಾನವಾಗಿಸಲೆನ್ನುವ ತಾಯ ಕರುಳಿನ ಗೀತ ಶುದ್ಧ ನಿರ್ಮಲ ಶೃಂಗಾರವಾದರೆ ಗಾಳಿ ಹೇಳಿದ ಚಾಡಿ ವರುಣ ಸಂತಾನ ಸ್ವಭಾವೋಕ್ತಿಯ ವರ್ಣನಾತ್ಮಕ ಕವಿತೆ.

ಇಂಥವುಗಳಲ್ಲದೆ ಗ್ರಾಮ ಪಂಚಾಯತಿ ಮೀಸಲಾತಿ, ಕೆರೆ ಹೂಳಿನ ಕೂಳು, ನಮ್ಮ ದೇಶ ಭಾರತ ಎಂಬ ಕವನಗಳು ವಿಡಂಬನಾತ್ಮಕ ಗೀತೆಗಳು ಗ್ರಾಮ ಪಂಚಾಯಿತಿ, ಮೂವತ್ತಮೂರು ಮೀಸಲಾತಿ ಮಹಿಳೆಯರಿಗಿದ್ದರೂ, ಅವರ ಅಶಿಕ್ಷಣದ, ಅನನುಭವದ, ದೃಷ್ಟಿಯಿಂದ ಗಂಡಂದಿರ, ಅಧಿಕಾರಿಗಳ ಕೈಗೊಂಬೆಗಳಾಗಿರುವ ದೇಶದ ದುರವಸ್ಥೆ ಗ್ರಾಮ ಪಂಚಾಯತಿ ಮೀಸಲಾತಿ ಕವನದಲ್ಲಿ ನಿಷ್ಠುರ ಧಾಟಿಯಲ್ಲಿ ಚಿತ್ರಿತವಾಗಿರುವುದು ಸತ್ಯವೆಂದು ತೋರಿದರೂ, ಅದನ್ನು ತಿದ್ದಿ ಸರಿಪಡಿಸಬೇಕಾಗಿದೆ ಎಂಬ ಧ್ವನಿ ಕವಿತೆಯಲ್ಲಿ ಮೂಡಿದೆ. 'ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾ' ಎಂಬ ಸ್ಮತಿ ವಾಕ್ಯದಂತೆ, ಮಾತೃದೇವೋಭವ ಎಂಬ ಮಂತ್ರದ ಹಿರಿಮೆಯಂತೆ. ಭಾರತ ಸ್ವತಂತ್ರವಾದ ಮೇಲಾದರೂ ನಾವು ಸ್ತ್ರೀಪುರುಷ ಸಮಾನ ಯೋಗ್ಯತೆಗಳನ್ನು ಸಾರ್ವಜನಿಕ ಜೀವನದಲ್ಲಿ ಸರ್ವಾಂಗ ಪರಿಪಾಲಿಸತಕ್ಕದ್ದು. ಕೆರೆ ಹೂಳಿನ ಕೂಳು ಒಂದು ಭ್ರಷ್ಟಗಾಥೆ. ಗುತ್ತೇದಾರ ಪೂರ್ತಿ ಕೆಲಸ ಮಾಡದೆ ಹಣ ಪಡೆಯುವ ಕುಹಕ ನಡೆಸುತ್ತಿರುವಾಗ, ಊರ ಯುವಕರು ನಿಸ್ವಾರ್ಥದಿಂದ ದುಡಿದು ಕಾರ್ಯ ಪೂರೈಸಿದರೂ, ಯುವಕರ ಸೇವೆಯ ಲಾಭವನ್ನು ಅಧಿಕಾರಿಯೊಡನೆ ಗುತ್ತೇದಾರ ಹಂಚಿಕೊಳ್ಳುವ ದುಸ್ಸಾಹಸದ ಚಿತ್ರ ಈ ಕವಿತೆ.

'ನಮ್ಮ ದೇಶ ಭಾರತ' ಒಂದು ದೀರ್ಘ ವಿಡಂಬನಾತ್ಮಕ ಕವನ. ಈ ಶಿರೋನಾಮೆ ದೇಶಾಭಿಮಾನ ಸೂಚಕ, ಆದರೆ ಈ ಹೆಸರಿನಲ್ಲಿ ಕೆಲ ಮಂತ್ರಿ

ಮಾನ್ಯರು, ಶಾಸಕರು, ರಾಜಕಾರಣಿಗಳು ಡಿಲ್ಲಿ, ಪಂಜಾಬ್, ಕಲ್ಕತ್ತೆ, ಕಾಶ್ಮೀರ ಮತ್ತು ದಕ್ಷಿಣ ಭಾರತ, ಕೇಂದ್ರ ಪ್ರದೇಶಗಳಲ್ಲಿ ಮಾಡುತ್ತಿರುವ ವಂಚನೆ, ಅತ್ಯಾಚಾರ, ಕೊಲೆ ಸುಲಿಗೆಗಳನ್ನು ನಿತ್ಯ ನೋಡುತ್ತ ಅನುಭವಿಸುತ್ತ ಇದ್ದು ಅವರನ್ನು ಕ್ಷಮಿಸುವ ದಯಾವಂತರು ನಮ್ಮ ದೇಶದ ಬಡಜನರು ಎನ್ನುವ ಕವಯಿತ್ರಿ ಕೊನೆಗೆ ಇಂದಲ್ಲ ನಾಳೆ ಎಚ್ಚರಗೊಂಡು ಹೊಸ ಬದುಕು ಬಾಳುವುದರಲ್ಲಿ ಸಂದೇಹವಿಲ್ಲ ಎಂಬ ಆಶಾವಾದವನ್ನು ವ್ಯಕ್ತಪಡಿಸುತ್ತಾರೆ. ಈ ಆಶಾವಾದ ನಿಜವಾಗಿಯೂ ಅಭಿನಂದನೀಯ.

ಕವಯಿತ್ರಿಯ ಭಾಷೆ ಶುದ್ಧವಾಗಿದೆ. ಹೆಚ್ಚಿನ ಕವನಗಳು ಛಂದೋಬದ್ಧವಾಗಿವೆ. ಲಯಗತಿಗಳಿಂದ ಓದಿ ಆಸ್ವಾದಿಸುವಂತೆ ಹಾಡಿಯೂ ಸಂತೋಷಪಡಬಹುದು. ಇದಕ್ಕೆ ಶ್ರೀಮತಿಯವರು ಹುಟ್ಟಿ ಬೆಳೆದ ಪ್ರದೇಶದ ಸಾಂಸ್ಕೃತಿಕ, ಸಾಹಿತ್ಯಿಕ ವಾತಾವರಣವೂ ಅನುಕೂಲವಾದುದು. ಕಾಸರಗೋಡಿನ ಕುಂಬಳೆಯ ನಾರಾಯಣ ಮಂಗಲದ ಒಂದು ಹಳ್ಳಿಯಲ್ಲಿ ಹುಟ್ಟಿದವರು ಅವರು. ಅಲ್ಲಿ ಹಿಂದೆ ಒಂದು ಶ್ರೇಷ್ಠ ಸಂಸ್ಕೃತ ವಿದ್ಯಾಲಯವಿತ್ತು. ಅಲ್ಲಿ ಅಭ್ಯಾಸ ಮಾಡಿದ ಅನೇಕರು ಸಿದ್ಧ ಪ್ರಸಿದ್ಧರು. ನಾರಾಯಣ ಮಂಗಲದ ಬಳಿಯ ಊರು ಕಾನ ಎಡನಾಡು. ಹಳೆಗನ್ನಡದಂತಿರುವ ಹವ್ಯಕ ಭಾಷೆಯನ್ನಾಡುವ ಕುಟುಂಬಗಳು ಅಲ್ಲಿ ಬಹಳವಿವೆ. ಅವರೆಲ್ಲ ಭಾಷಾಭಿಮಾನಿಗಳು. ಆದಿಕವಿ ಪಂಪನ ಮಹಾಕಾವ್ಯಗಳಲ್ಲಿ ಹವ್ಯಕ ಭಾಷೆಯ ಎಷ್ಟೋ ಪದಗಳಿವೆ. ಅಂತಹ ವಾತಾವರಣದಲ್ಲಿ ಸಾಹಿತ್ಯ ಸಂಸ್ಕೃತಿ ಸಂಪನ್ನ ಸಮಾಜದಲ್ಲಿ ಜನಿಸಿ ಮುಂದೆ ಡಾ. ಮರಕಿಣಿ ಮಾಲಿಂಗಭಟ್ಟರ ಧರ್ಮಪತ್ನಿಯಾಗಿ ಅವರೊಂದಿಗೆ ಸಾಮಾಜಿಕ ಸೇವಾ ಕಾರ್ಯವನ್ನು ತನ್ನ ವೃತ್ತಿಯಲ್ಲಿಯೂ ಸಾಹಿತ್ಯ ಸಂಸ್ಕೃತಿಯ ಸಾಧನೆಯನ್ನು ತನ್ನ ಪ್ರವೃತ್ತಿಯಲ್ಲಿಯೂ ಮುಂದುವರಿಸುತ್ತಿರುವ ಡಾ. ಸಬಿತಾದೇವಿಯವರಿಗೆ ಇನ್ನಷ್ಟು ಶ್ರೇಯಸ್ಸು ಲಭಿಸಲಿ ಎಂದು ಹಾರೈಸುತ್ತೇನೆ.

**ಪೆರಡಾಲ** **ಕಯ್ಯಾರ ಕಿಞ್ಞಣ್ಣರೈ**

**1999 ರಲ್ಲಿ ಪ್ರಕಟವಾದ ಕವನ ಸಂಕಲನಕ್ಕೆ ಡಾ॥ ಕೈಯ್ಯಾರರು ಬರೆದ ಮುನ್ನುಡಿಯಾನ್ನು ಮರು ಮುದ್ರಿಸಲಾಗಿದೆ.**

**– ಸಂಪಾದಕ**

# ಮುನ್ನುಡಿ - ೨

ಡಾ. ಸಬಿತಾದೇವಿ ಮರಕಿಣಿ ಅವರು ವೃತ್ತಿಯಿಂದ ಜನಪ್ರಿಯ ವೈದ್ಯೆ, ಪ್ರವೃತ್ತಿಯಿಂದ ಶ್ರೀಮಂತ ಹೃದಯದ ಸೃಜನಶೀಲ ಸಾಹಿತಿ. ಮನುಷ್ಯನಿಗೆ ದೇಹದಾರ್ಢ್ಯವು ಹೇಗೆ ಅವಶ್ಯವೋ ಹಾಗಯೇ ಮನೋಸ್ವಾಸ್ಥ್ಯವೂ ಅತ್ಯವಶ್ಯ. ಅನೇಕ ಸಲ ಮನೋಸ್ವಾಸ್ಥ್ಯದಿಂದ ಆರೋಗ್ಯ ಪ್ರಾಪ್ತಿಯಷ್ಟೇ ಅಲ್ಲ ಸಮಾಜದಲ್ಲಿ ಅತ್ಯುನ್ನತ ಗೌರವದಿಸೆ ಲಭ್ಯ. ಈ ದೃಷ್ಟಿಯಿಂದ ಡಾ. ಸಬಿತಾದೇವಿಯವರ ವೈದ್ಯವೃತ್ತಿಯು ತಂದುಕೊಟ್ಟ ಸಮಾಜ ದರ್ಶನ ಅವರ ಸಾಹಿತ್ಯ ಪ್ರತಿಭೆಗೆ ದಾಸ್ತಾನು ಒದಗಿ ಬಂತು. ಆ ದಾಸ್ತಾನು ಸೃಜನಶೀಲತೆಯ ಕುಲುಮೆಯಲ್ಲಿ ಪುಟಗೊಂಡು ಅನೇಕ ಭಾವಗೀತೆಗಳು ಲಯ ಬದ್ಧತೆಯಲ್ಲಿ, ಭಾವಶುದ್ಧತೆಯಲ್ಲಿ ನಿಷ್ಪನ್ನಗೊಂಡುವು. ಅಲ್ಲಿ ಆ ಭಾವಗಳು ಕೇವಲ ವೃಷ್ಟಿಯ ಅನುಭವದ ಮೇಳವಿಕೆಯಲ್ಲಿ ಅಕ್ಷರಲೋಕದ ಶಬ್ದಾರ್ಥಗಳಾಗಿ ಬೆಳಕು ಚೆಲ್ಲಿದೆ. ಆ ಬೆಳಕು ಸಾಮಾನ್ಯರೆಲ್ಲರ ಭಾವಗಳ ಸಮಸ್ಪರ್ಶದಲ್ಲಿರುವ ಸಾರ್ವಕಾಲಿಕ ನೆಮ್ಮದಿಯ ತಾಣ. ದೀಪ್ತಿಗಳಾಗಿ ಕಣ್ಣುಗಳಿಗೂ ಮನಸ್ಸುಗಳಿಗೂ ತಂಪು ನೀಡುವ ಹೊಳಪಿನ ಕಣಜದ ಸೊತ್ತಾಗಿದೆ. ಆ ಸೊತ್ತಿನ ಸೊಗಡಿನಿಂದಾಗಿ ಸುಂದರ ಸಮಾಜ ನಿರ್ಮಾಣ ಹಾಗೂ ಅಲ್ಲಿ ಅದರ ಮೂಲ ಘಟಕವಾದ ಶ್ರೀಸಾಮಾನ್ಯನ ಬದುಕು ಮನೋಸ್ವಾಸ್ಥ್ಯವನ್ನು ಪಡೆವ ನೆಮ್ಮದಿಯ ತಾಣವೂ ಕೂಡ. ಹೀಗೆ ವೈದ್ಯೆಯೊಬ್ಬರು ಸಮಾಜಮುಖಿಯಾಗಿ ಆರೋಗ್ಯಸ್ವಾಸ್ಥ್ಯ ಮತ್ತು ಮನೋಸ್ವಾಸ್ಥ್ಯಗಳ ವಿಕಾಸಕ್ಕೆ ಸಾಹಿತ್ಯ ಶಕ್ತಿಯಾಗಿ ಪರಿಣಮಿಸಿದ ಗೌರವಾನ್ವಿತ ವ್ಯಕ್ತಿಗಳಲ್ಲಿ ಡಾ.ಸಬಿತಾದೇವಿ ಅವರ ಕೊಡುಗೆ ವಿಶಿಷ್ಟವಾದದ್ದು ಹಾಗೂ ಸ್ಫೂರ್ತಿದಾಯಕವಾದದ್ದು.

ಡಾ. ಸಬಿತಾ ಅವರು ತಮ್ಮ ವೈದ್ಯವೃತ್ತಿಯನ್ನೇ ಸಮಾಜೋಪ್ರವೃತ್ತಿಯನ್ನು ಮಾಡಿಕೊಂಡು ಸ್ವಾನಂದ ಪ್ರಾಪ್ತಿಯಲ್ಲಿ ಅತ್ಯುನ್ನತ ಮಟ್ಟಕ್ಕೆ ಏರುತ್ತಾ ಹೋದಂತೆ ಸಮಯಸ್ಫೂರ್ತಿಯಲ್ಲಿ ಅವರಲ್ಲಿ ಅರಳಿ ಬಂದ ಭಾವಗಳು ಅನೇಕ. ಭಾವಗೀತೆಗಳಾಗಿ ರೂಪ ಪಡೆದುವು. ಇವು ಅನಾಯಾಸವಾಗಿ ಬಂದ ರೂಪಗಳು.

ಸರಳಭಾಷೆಯು, ಪದಮೈತ್ರಿಯಿಂದಾಗಿ ಭಾವಾಭಿವ್ಯಕ್ತಿಯಲ್ಲಿ ಸಾಮಾನ್ಯನಿಗೂ ರಸಾನಂದ ನೀಡುವಂತಹ ರಚನೆಗಳು, ಪ್ರಾಸಲಯಗಳೆಲ್ಲ ಅರ್ಥದ ಔನ್ನತ್ಯವನ್ನು ಹೆಚ್ಚಿಸುವಲ್ಲಿ ತೀಡಿ ತೀಡಿ ಬಂದು ಸಾಮಾನ್ಯತೆಯಲ್ಲಿಯ ಸ್ವಭಾವದ ಪ್ರಜ್ವಲತೆಯಲ್ಲಿ ಅಲೌಕಿಕದ ತಾಣದೊಡನೆ ಏಕಾತ್ಮಗೊಳಿಸುವಲ್ಲಿ ಸಂಸ್ಕಾರಪ್ರಾಯವಾದುವು. ಜೊತೆಗೆ ಈ ವೈದ್ಯೆ ಸೃಜನಶೀಲ ಮನಸ್ಸನ್ನು ಹೊಂದಿದ್ದರಿಂದ, ಸಮಕಾಲೀನ ಕವಿ ಕಾವ್ಯಾನುಭೂತಿಯು ಸಂಸ್ಪರ್ಶದಲ್ಲಿ ಹದವಾದ ಕಾವ್ಯಶೈಲಿಯುನ್ನು ಮೈ ಗೂಡಿಸಿಕೊಂಡವರು. ಹೀಗಾಗಿ ನವೋದಯ ಕಾಲದ ಕಾವ್ಯಬಂಧದಲ್ಲಿ ಮನಸ್ಸನ್ನು ಹಿಡಿದಿಟ್ಟು ಸಹಜ ಸಂಸ್ಕಾರಕ್ಕೊಳಪಡಿಸಿ – ಅದರ ಪರಿಣಾಮವನ್ನು ಕೇಳುಗರ ಮೇಲೆ/ ಓದುಗರ ಮೇಲೆ ದಟ್ಟವಾಗಿ ಮೂಡಿಸಿ – ಆ ಮನಸ್ಸುಗಳಲ್ಲಿ ಉಲ್ಲಾಸದ ಸೊಬಗನ್ನು ಉಕ್ಕೇರಿಸಿ, ನಿರ್ವಿಕಲ್ಪವಾದ ಸಹಜ ಸ್ಥಿತಿಯ ಅಂತಃಕರುಣೆಯು ಅಲ್ಲಿ ಸದಾ ಚಿಲುಮಿಸಲು ಪ್ರೇರಣೆಯಾಗಿ ನಿಂತು, ಆ ಆಯುಸ್ಕಾಂತಕ್ಕೆ ಆಕರ್ಷಿತರಾದವರನ್ನೆಲ್ಲ ರೂಪಿಸುವ ಧಾವಂತಕ್ಕೆ ಅಣಿ ಮಾಡಿಕೊಡುವ ಆ ಕಾರ್ಯವು ಯಶ ಪಡೆದಿದೆ. ಈ ಯಶದಲ್ಲಿ ಮಾನವ ಸಂಪನ್ಮೂಲದ ಬಳಕೆಯ, ಪ್ರವೃದ್ಧಿಯ ಹಿತಾಸಕ್ತಿಯ ಆಶಯಗಳು ಸಂಪನ್ನಗೊಂಡಿರುವುದು ಬಹುಮುಖ್ಯ.

ಇಂತಹ ನೀಲನಕ್ಷೆಯಲ್ಲಿ ಡಾ. ಸಬಿತಾ ಮರಕಿಣಿ ಅವರು ನೂರಾರು ಕವಿತೆಗಳನ್ನು ತಮ್ಮ ಭಾವಲೋಕದಿಂದ ಅಕ್ಷರಲೋಕಕ್ಕೆ ನೀಡಿ, ಕನ್ನಡ ಕಾವ್ಯಲೋಕದಲ್ಲಿ ತಮ್ಮ ಸ್ಥಾನವನ್ನು ಸ್ಥಾಪಿಸಿದ್ದಾರೆ. ಅವರ ಇಂತಹ ಕವನ ರಾಶಿಯಲ್ಲಿ ಈಗಾಗಲೇ ಆಯ್ದ ಕವನಗಳ ಸಂಕಲನ 'ಹೆಸರಿಡದ ಕವನ ಸಂಕಲನ' ಎಂಬ ಹೆಸರಿನಲ್ಲಿ ಕ್ರಿ.ಶ 1999ರಲ್ಲಿ ಪ್ರಕಟಗೊಂಡ ಸಾರಸ್ವತ ಲೋಕದಲ್ಲಿ ಗರಿಗೆದರಿದೆ – ಕನ್ನಡದ ಹಿರಿಯಕವಿ ಶ್ರೀ ಕಯ್ಯಾರ ಕಿಞ್ಞಣ್ಣರೈ ಅವರು ಹೃದಯ ಸ್ಪರ್ಶಿ ಮುನ್ನುಡಿ ನೀಡಿ ಶುಭ ಹಾರೈಸಿ ಆಶೀರ್ವದಿಸಿದರು. ಡಾ. ಸಬಿತಾ ಮರಕಿಣಿ ಈಗ ನಮ್ಮ ಕಣ್ಣೆದುರು ಇಲ್ಲ. ಆದರೆ ಪುಸ್ತಕ ರೂಪದಲ್ಲಿ ಪ್ರಕಟವಾಗದ ನೂರಾರು ಅವರ ಕವಿತೆಗಳು ನಮ್ಮೆದುರು ಗರಿಗೆದರಿಕೊಂಡು ನಿಂತಿವೆ. ಅವುಗಳಲ್ಲಿ ಸುಮಾರು 90 ಕವಿತೆಗಳು ಈಗ 'ಹೆಸರಿಡದ ಕವನ ಸಂಕಲನ–ಎರಡನೆಯ ಭಾಗ' ಎಂಬ ಹೆಸರಿನಿಂದ ಪ್ರಕಟಗೊಳ್ಳಲು ಸಿದ್ಧವಾಗಿದೆ. ಈ ಸಿದ್ಧಿಕಾರ್ಯಕ್ಕೆ ಡಾ. ಸಬಿತಾ ಮರಕಿಣಿಯುವರ ಧರ್ಮಪತಿ ಡಾ. ಎಂ.ಎಂ. ಭಟ್ಟ ಮರಕಿಣಿ ಯವರು ಆ ಕವಿತೆಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇದು ಅವರಿಬ್ಬರ ಜೀವನ ಪ್ರೀತಿಯ ಪ್ರತೀಕ. ಸ್ವಾಸ್ಥ್ಯದ ಬದುಕಿಗೆ ಪುಸ್ತಕದ ಭವಿಷ್ಯಕ್ಕೆಲ್ಲ ಪ್ರೇರಣೆಯ ಸ್ವರೂಪ.

ಈ 'ಹೆಸರಿಡದ ಕವನ ಸಂಕಲನ' ಎಂಬ ಶೀರ್ಷಿಕೆಯ ಔಚಿತ್ಯದ ಬಗ್ಗೆ ಒಂದಿಷ್ಟು ಮನಸ್ಸನ್ನು ಸುತ್ತಮುತ್ತ ಓಡಿಸಿದರೆ – ಇಲ್ಲಿಯ ಕವಿತೆಗಳಲ್ಲಿಯ ಭಾವ

ಸಂವೇದನೆಗಳೆಲ್ಲ ಎಲ್ಲರ ಬದುಕಿನಲ್ಲಿಯೂ ತಿದಿ ಹಾದುಹೋಗಿ ಅವರವರ ಅನುಭವದ ನೆನಪಿನಲ್ಲಿ ಸುಧಾಸ್ವಾದವನ್ನು ನೀಡಿದ ಮಹತ್ತಿನವು. ಹೀಗಾಗಿ ಈ ಭಾವಗಳು ಅಕ್ಷರಲೋಕಕ್ಕೆ ಇಳಿದ ಶಬ್ದಾರ್ಥದ ಸಂಕಲನಕ್ಕೆ ಹೆಸರಿಡುವ ಗೋಜೇ ಬೇಡ ಅವರವರ ಭಾವದ ಸೂಡಿಗೆ ಅವರವರದೇ ಹೆಸರು. ರೂಪ ಹಲವು ಭಾವವೊಂದೇ ನಾಮ ಒಂದೇ ಒಂದು– ಅದು ಹೆಸರಿಡದ ಕವನ ಸಂಕಲನ ಅದಕ್ಕಾಗಿ ಇಲ್ಲಿ ಹೆಸರಿಡುವ, ಹೆಸರಿಡಿಸುವ ಪ್ರಸಂಗವೇ ಬರುವುದಿಲ್ಲ. ನಾವೆಲ್ಲ ಅಲ್ಲಿಯೇ ಸಮಭಾವವಾಗಿ ಇರುವುದರಿಂದ ಯಾರಿಗೆ ಯಾರು ಬೆರಳಿಟ್ಟು ಹೆಸರಿನ ಸಂಜ್ಞೆ ಮಾಡಿ ಕರೆಯಬೇಕು. ಹೀಗಾಗಿ ಈ ಕವನ ಸಂಕಲನದ ಹೆಸರಿನಲ್ಲಿ ಸಮಭಾವದ ಅಭಿವ್ಯಕ್ತಿ ಇದೆ. ಅದಕ್ಕಾಗಿ ಕವಿಯ ದೃಷ್ಟಿಯು ಸಾಮ್ಯತೆಯಿಂದ ಕೂಡಿದ ಸಮದೃಷ್ಟಿ. ಅವನನ್ನು ನಾವು ಅಭಿನಂದಿಸೋಣ. ಎಲ್ಲಿಯೂ ನಮ್ಮದೆಂದು ಹಕ್ಕು ಸಾಧಿಸದೆ ಇರೋಣ. ಸರ್ವೇ ಜನರೆಲ್ಲ ಸಮಭಾವ ಸಂವೇದನೆಗಳ ಆತ್ಮದವರು ಎಂಬುದು ನಿಜ. ಇದು ಈ ಸಂಕಲನದ ಶೀರ್ಷಿಕಾ ಸಂದೇಶ. ಈ ವಿವೇಚನೆಯು ಈ ಕವನ ಸಂಕಲನದ ಎಲ್ಲಾ ಭಾಗಗಳಿಗೂ ಅನ್ವಯವಾಗಿದೆಯೆಂಬುದು ನನ್ನ ಭಾವನೆ.

"ಹೆಸರಿಡದ ಕವನ ಸಂಕಲನ–ಭಾಗ–1" ರಲ್ಲಿ ಇರುವ ಕವನಗಳನ್ನೆಲ್ಲ ತಾದಾತ್ಮ್ಯವಾಗಿ ಓದಿ, ಗುನುಗುನಿಸಿ, ಮನನ ಮಾಡಿಕೊಂಡ ಅನಂತರ ಸ್ಥೂಲವಾಗಿ ಹನ್ನೆರಡು ಪದರುಗಳಲ್ಲಿ ವಿಂಗಡಿಸಿಸಲು ಯೋಚಿಸಿದ್ದೇನೆ. ಬದುಕು ಕಾವ್ಯದ ಪ್ರತಿಬಿಂಬವೆಂಬುದನ್ನು ಒಪ್ಪಿಕೊಂಡರೆ ಬದುಕಿಗೆ ಆಶಯವಿದೆ. ಆ ಆಶಯದ ನಿಟ್ಟನ್ನು ಹೊಸ ಕನಸು ಬೇಕು, ಮರಳರಾಶಿಯಲ್ಲೊಂದು ಕಣ, ನಿನಗೇನು ಬೇಕು ಹೊಸಕನಸುಗಳೇ ಓಡಿಬನ್ನಿ, ಬಯಸಿದ ಕಣ, ನಿನಗೇನು ಬೇಕು, ಹೊಸಕನಸುಗಳೇ ಓಡಿ ಬನ್ನಿ, ಬಯಸಿದ ಸಾಮ್ರಾಜ್ಯ, ನಾನಿಲ್ಲಿ ಸುಖ – ಎಂಬಂತಹ ಕವನಗಳಲ್ಲಿ ಕಾಣಲು ಸಾಧ್ಯ.

"ಕೆಲವಕ್ಕೆ ನೀರಿಲ್ಲ; ಹಲವಕ್ಕೆ ಫಲವಿಲ್ಲ; ನಿಂತಲ್ಲೆನಿಂತು ಕಲ್ಲಾಗಿ ಹೋದವು. ಬಾಳಲ್ಲಿ" (ಹೊಸ ಕನಸು ಬೇಕು)

"ಮರಳರಾಶಿಯಲ್ಲಿ ನಾನು ಕಾಣದಿದ್ದರೂ ಕೂಡಾ ಇದನೆಲ್ಲ ನೋಡುವ ಸೌಭಾಗ್ಯವಿರಬೇಕು. ಅದಕೆ ಮರಳರಾಶಿಯಲಿ ನಾ ನೊಂದು ಕಣವಾಗಬೇಕು" (ಮರಳರಾಶಿಯಲ್ಲೊಂದು ಕಣ)

"ಕನಸಿಲ್ಲದ ಬದುಕು; ಸಪ್ಪೆಯಾಗಿದೆ ನನಗೆ

ತಿನಿಸಿಲ್ಲದ ಬಾಯಿಗೆ; ಚಪ್ಪರಿಸಲು ಬೇಕೆಂಬ ಆಸೆ."
ವರುಷ ವರುಷಗಳು ಕಳೆದು ಹೋಗಲು ನನಗೆ
ಕನಸುಗಳು ಬೇಕೇ ಬೇಕು । ಕನಸಿನಲೆ ಬಾಳು ಸವಿಯಬೇಕು।
(ಹೊಸ ಕನಸುಗಳೇ ಓಡಿ ಬನ್ನಿ)
"ಕಂಡರಿಯದ ರಾಜ್ಯಕ್ಕೆ; ರಾಜನಾಗು ಎನಬೇಡ
ಉಂಡರಿಯದನ್ನವನು; ಗಂಟಲಿಗೆ ತುರುಕಬೇಡ"
(ಬಯಸಿದ ಸಾಮ್ರಾಜ್ಯ)

ಅಲ್ಲಿ ಇಂತಹ ಸಾಲುಗಳು ಕವಯಿತ್ರಿಯ ಆಶಯಗಳನ್ನು ಸಾಮಾನ್ಯ ಬದುಕಿನ ಆಶಯಗಳ ನೆಲೆಯಲ್ಲಿ ಕೋದುಕೊಂಡಿವೆ. ಈ ಆಶಯಗಳ ನೆಲೆಯಲ್ಲಿ ಬದುಕಿನ ಜೀವನೋಲ್ಲಾಸದ ತೆರೆಗಳ ನಾದದಲ್ಲಿಯೆ ಸ್ವಾದವನ್ನು ಅನುಭವಿಸಬಹುದು.

ಆಶಯುಗಳಿಂದ ಉಲ್ಲಾಸಗೊಂಡ ಬದುಕು ಸಮಾಜಮುಖಿಯಾಗಿ ತೊಡಗಿದಾಗ ಅನೇಕ ಸಲ ಏಳುಬೀಳುಗಳ ಮಧ್ಯೆ, ಹೋಲಿಕೆಗೆ ಇಳಿದು ಓರೆಕೋರೆಗಳನ್ನು ಕಂಡುಕೊಂಡು ಹೊರಟ ಸಮಯದಲ್ಲಿ ಜೀವನ ತತ್ವಗಳನ್ನು ಪರೀಕ್ಷಿಸುತ್ತ ಸಾಮಾನ್ಯತೆಯಲ್ಲಿ ನಿಂತು ಆತ್ಮಾವಲೋಕನವನ್ನು ಮಾಡಿಕೊಳ್ಳತೊಡಗಿ ದಾಗ ಆ ಆತ್ಮನಿವೇದನೆಯಲ್ಲಿ ಆ ಜೀವನತತ್ವಗಳ ಮಥಿತಾರ್ಥದ ನವನೀತವು ಸ್ವಾದವನ್ನು ನೀಡತೊಡಗುತ್ತದೆ. ಅಂತಹ ಆಶಯದ ಸಾಲುಗಳಲ್ಲಿ– ಕಳೆದಿದ್ದ ಚೇತನ, ಯಾರಿದ್ದೀರಿ ಒಳಗೆ, ಬೇಡುತಿಹೆ ವರವ, ನನ್ನ ಪಯಣ, ನಡೆದ ದಾರಿ, ಹೃದಯದ ಭಾಗ, ರೆಕ್ಕೆ ಮುರಿದ ಹಕ್ಕಿ, ದೇಹದೊಳಗಿದ್ದ ನಿಂತ ಜಾಗದಲ್ಲಿ ನಿಂತಿದ್ದೇನೆ, ಈ ಬದುಕು ಒಂದು ಜೀವಿಯ ಸದ್ಗತಿ, ಕಾನನದ ಮರ, ಬಸುರಿಂದ ಬಂದವರು, ಬಡತನವ ಕೊಡು ಎನಗೆ, ನಿನ್ನಾಟವು, ಬಾಳಗಡಿಗೆ, ಜ್ಞಾನದಾಹ, ಮೂಕವೇದನೆ,

ಮೊದಲಾದ ಕವನಗಳಲ್ಲಿ ಸ್ಫುರಣಗೊಂಡಿವೆ.
"ಮತ್ತೆ ನಡೆಯುತ್ತೇನೆ ಗಾಳಿಯಲಿ
ಇಲ್ಲಿ ಕಾಲುಗಳೇ ಇಲ್ಲ; ಮೈಭಾರವಿಲ್ಲ
ಎತ್ತ ನೋಡಿದರೂ ಬರಿ ಶೂನ್ಯ
ಇನ್ನು ನಡೆಯಲಾರೆ ಮುಂದಕ್ಕೆ

ಹಿಂದಕ್ಕೆ ಸರಿಯುತ್ತೇನೆ; ನಾನಿದ್ದ ತಾಣಕ್ಕೆ" (ಪಯಣ)

"ಯಾರು ಹೊಡೆದರೋ ಎಷ್ಟು ಬಡಿದರೋ
ದೂರ ಹೇಳದಾಯಿತು' ತನ್ನ ನೋವ ತಾನೆ ಉಂಡು
ಮರೆತು ಹೋಯಿತು ಜಗದಲಿ" (ರೆಕ್ಕೆ ಮುರಿದ ಹಕ್ಕಿ)

"ಹಿಂದಿದ್ದೆ – ಎಂಬ ನೆನಪೊಂದನ್ನು ಬಿಟ್ಟು
ಮುಂದಿನಾ ಪೀಳಿಗೆಗೆ ಬದುಕು ಕೊಟ್ಟು ಸಾಗುತ್ತದೆ" (ದೇಹದೊಳಗಿದ್ದದ್ದು)

"ಗಡಿಯಾರದ ಮುಳ್ಳಿನಂತೆ ಸುತ್ತುಸುತ್ತು ತಿರುಗಿ –
ಹೊರಟಲ್ಲಿಗೆ ತಲುಪುತ್ತೇನೆ" (ನಿಂತ ಜಾಗದಲ್ಲಿ ನಿಂತಿದ್ದೇನೆ)

"ಕಣ್ಣು ಬಿಟ್ಟಾಗಲೂ ಮನವು ತೆರೆಯಲಿಲ್ಲ
ಎಲ್ಲೆಲ್ಲೊ ಅಲೆದಾಡಿ ಮತ್ತೆ ಎದೆಯೊಳಕ್ಕೆ ಬಂದಿತು
ಕೊನೆಗೊಮ್ಮೆ ಕರಗಿತು
ಎದೆಯೊಳಗಿನ ಹಿಮವು ಕಣ್ಣೀರಾಗಿ ಹರಿಯಿತು
ಧಾರೆಧಾರೆಯಾಗಿ!" (ಮೂಕವೇದನೆ)

ಇಲ್ಲಿ ಮನನೊಂದ ಪ್ರಕರಣಗಳು ಪಶ್ಚಾತ್ತಾಪದ ಮೂಸೆಯಲ್ಲಿ ತಪ್ತಗೊಂಡು ನಿರಾಳತೆಯನ್ನು ತರುವ ಕಡೆಗೆ ಆತ್ಮನಿವೇದನೆಯಾಗುತ್ತವೆ. ಆಗ ಆ ನೆಲೆಯಲ್ಲಿ ತಾತ್ವಿಕ ವಚನಗಳು ಕಾವ್ಯ ಧ್ವನಿಯಾಗಿ ನಿಂತು ಹೊಸ ಬಾಳಿಗೆ ಹೊಸ ಭಾಷೆಯನ್ನು ನೀಡಲು ಹೊರಡುತ್ತವೆ. ಇಂಥಲ್ಲೆಲ್ಲ ಕವಯತ್ರಿಯ ತಾತ್ವಿಕ ಚೇತನ ಪ್ರತಿಭೆಯು, ತನ್ನದೇ ನಡೆದಾಟಗಳಲ್ಲಿ ಹರಿದಾಡಿದುದನ್ನು ಹಾಡಾಗಿಸಿದ ರೀತಿಯಲ್ಲಿಯೇ ಮನಸ್ಸು ಸಮಾಧಾನವನ್ನು ಪಡೆಯುತ್ತದೆ.

ಸಮಭಾವದ ತತ್ವಚೇತನದ ಸ್ಥರದ ಮೇಲೆ ಬದುಕು ಹಾಸುಹೊಕ್ಕಾಗಬೇಕಾದರೆ, ವ್ಯಕ್ತಿಯಲ್ಲಿಯ ಸಹಜ ಮಾನವನ ಸಂವೇದನೆಗಳಾದ ಕೌಟುಂಬಿಕ ಜೀವನದಲ್ಲಿಯ ಪ್ರೀತಿ ಪ್ರೇಮಗಳು ದೊಡ್ಡ ಪಾತ್ರವನ್ನು ವಹಿಸುತ್ತವೆ. ಆ ಸೊಗಸನ್ನು ಅನುಷ್ಠಾನಕ್ಕೆ ತಂದುಕೊಳ್ಳದಿದ್ದರೆ ಬದುಕು ದುರಂತವಾಗುತ್ತದೆ.

ಕವಿಯತ್ರಿಯು ಮನನ ಮಾಡಿಕೊಂಡು, ಸ್ವಾನುಭವದ ಚಿತ್ತದ ನೆಲೆಯಲ್ಲಿರುವ ಸಾಮರಸ್ಯ ದಾಂಪತ್ಯದ ಅರ್ಥಪೂರ್ಣ ಸೊಬಗನ್ನು ತಮ್ಮ ಕಾವ್ಯಮಂದಾರದಲ್ಲಿ ಸಹಜ ಚೈತನ್ಯದ ಹೊಗರಿನಲ್ಲಿ ಅಣಿಗೊಳಿಸಿರುವುದು ಅವರಲ್ಲಿರುವ ಜೀವನ ಪ್ರೀತಿಯಲ್ಲಿಯ ತ್ರಿಕಾಲಬಾಧಿತವಾದ ಬದುಕಿಗೆ ಇರುವ ಮಹತಿಯನ್ನು ತೆರೆದಿಟ್ಟ ಪಾಡಿನ ಹಾಡಾಗಿದೆ; ಈ ಪಾಡಿನಲ್ಲಿ – ಮುನಿದ ನಲ್ಲೆಗೆ, ನಾನೊಂದು ಹೆಣ್ಣು, ಸಪ್ತಪದಿ ತುಳಿದಾಗ, ಹೃದಯ ಚೋರ, ಹೃದಯದ ರಾಣಿಗೆ, ನೀನು ಕವನವಾಗಿಸು ನನ್ನ, ನನ್ನವಳ ನೆನಪು ಇತ್ಯಾದಿ ಹಾಡುಗಳ ಮೃದುಮಧುರಭಾವಗಳಿಂದ ಮನಸ್ಸುಗಳಿಗೆ ಮುದದ ತರಬೇತಿ ನೀಡುತ್ತವೆ.

**"ನಾನು ನಿತ್ಯ ವಧುವೆ**
**ಮುಡಿಯ ತುಂಬ ಹೂವ ಮುಡಿದು**
**ಕೊರಳ ತುಂಬ ನಗವ ತೊಟ್ಟು**
**ಕೈಗಳಲ್ಲಿ ಬಳೆಯ ತೊಟ್ಟು**
**ಪಟ್ಟೆ ಸೀರೆನುಟ್ಟುಕೊಂಡು**
**ಸೆರಗನೆಳದು ಕಟ್ಟಿಕೊಂಡು ನಿತ್ಯನಡೆಯುವೆ**
**ನಾನು ನಿತ್ಯ ಸುಮಂಗಲೆಯೆ!" (ನಾನೊಂದು ಹೆಣ್ಣು)**

**"ಸಪ್ತಪದಿಗಳ ತುಳಿದಾಗ ಸುಪ್ತಾಸೆ ಚಿಗುರಿತ್ತು**
**ಸತಿಪತಿಗಳಾದಾಗ ಬಾಳಸುಖ ದೊರಕಿತ್ತು! (ಸಪ್ತಪದಿ ತುಳಿದಾಗ–1)**

"ನನ್ನ ನೋವಿನ ಕಂತೆ, ನಿನ್ನ ಬೇನೆಯ ಕಂತೆ
ಕರಗಿ ಹೋದುವು ಇಲ್ಲಿ, ನವನೀತದಂತೆ!" (ಸಪ್ತಪದಿ ತುಳಿದಾಗ–2)

"ನಿನ್ನೆದೆಯಲ್ಲಿ ನನ್ನನ್ನೊಂದು ಕವನವಾಗಿಸಿಕೋ
ಮತ್ತೆಲ್ಲವ ಮರೆತುಬಿಡು" (ಕವನವಾಗಿಸು ನನ್ನ)

"ನಿನ್ನ ಕೆನ್ನೆಯ ಕುಳಿಯು ನನ್ನ ಕಂಗಳಿಗಿತ್ತು

ನಿನ್ನ ನಡೆನುಡಿಗಳು ನನ್ನ ಮನದೊಳಗಾಡುತ್ತಿತ್ತು;" (ನನ್ನವಳ ನೆನಪು)

ಈ ಜಾಡಿನ ಪದ್ಯಗಳಲ್ಲಿ ಯೌವ್ವನದಲ್ಲಿ ಪವಿತ್ರ ಮನಸ್ಸು ತುಂಬಿಕೊಂಡ ಸಪ್ತವರ್ಣದ ವಿಚಾರದ ಬೆಳಕು, ಆ ಬೆಳಕಿನ ಉದ್ಭವಕ್ಕೆ ಸಂಯಮವಾಗಿ ನಿಂತು ಒಂದಾದ ಸತಿಪತಿಭಾವ, ಪ್ರಕೃತಿ ಪುರುಷ ಸಾಮರಸ್ಯದಲ್ಲಿ ಮಾನವ ಸಂಪನ್ಮೂಲದ ಪರಿಪೂರ್ಣತೆಯನ್ನು ಪಡೆಯುವ ಸಮರಸ ಜೀವನದ ಧಾಟಿಯು ಸ್ಪಷ್ಟಗೊಂಡಿದೆ. ಆ ಧಾಟಿಯಲ್ಲಿ ಬದುಕಿನ ಪಯಣ ಸಾಗಿದರೆ ಸ್ವರ್ಗವೇ ನೆಲಕ್ಕಿಳಿದು, ಸ್ವರ್ಗವೆಲ್ಲ ಪರುಷಾರ್ಥಸಾಧನೆಗೆ ಎಡೆ ಮಾಡಿಕೊಡುತ್ತದೆ.

ಕವಿಯತ್ರಿಯ ಹೊಳಹುಗಳು ಸತಿಪತಿಗಳೊಂದಾದ ಭಾವದಲ್ಲಿಯ ನವನೀತದ ಸೊಗಸನ್ನು ನೀಡುತ್ತವೆ. ಮುಂದೆ ಖಮ್ಮನೆಯ ಸಂಸಾರಕ್ಕೆ ಎಡೆ ಮಾಡಿಕೊಡುತ್ತವೆ.

ಇಂಥ ಸಮರಸದ ಸಂಸಾರದ ನಿರ್ಮಿತಿಗೆ ನಿಸರ್ಗದ ಸೊಗಸಿನ ಪಾಠವು ಗಟ್ಟಿಯಾದ ಅಸ್ತಿಭಾರವನ್ನು ಹಾಕುತ್ತದೆ. ಈ ಮಾತನ್ನು ಮನೋಗತ ಮಾಡಿಕೊಂಡ ಕವಿಯ ಮನಸ್ಸು, ನಿಸರ್ಗದ ಕೂಸಾಗಿ ಆಡಿ ಪಾಡಿ, ಆ ಸೌಂದರ್ಯದಲ್ಲಿ ಪರಮಾತ್ಮನ ಚೆಲುವಿಕೆಯನ್ನು ಹಿಡಿದಿಟ್ಟುಕೊಂಡು ಮೆಲಕು ಹಾಕಿ, ನಿಸರ್ಗದಲ್ಲಿಯ ಬದುಕಿರುವ ಮೂಲ ಸಂವೇದನೆಗಳ ಸತ್ವವನ್ನು ಜೀರ್ಣಿಸಿಕೊಂಡು ಆಸ್ವಾದವನ್ನೆಲ್ಲ ಸಾರಸ್ವತ ಲೋಕಕ್ಕೆ ಸ್ವಾದಿಷ್ಟ ಕವಿತೆಗಳನ್ನಾಗಿಸಿ ಅರ್ಪಿಸಿ ಋಣಭಾರವನ್ನು ಹಗುರಮಾಡಿಕೊಳ್ಳಲು ಪ್ರಯತ್ನಿಸುವುದು ಕವಿಯತ್ರಿಯ ಮನೋಹರ ತಪಸ್ಸಿಗೆ ಬಂದ ಮೌಲ್ಯ. ಈ ನಿಟ್ಟಿನಲ್ಲಿ ಅವರ ಈ ಸಂಕಲನದಲ್ಲಿರುವ ಮಲ್ಲಿಗೆ, ಮಳೆಯ ಸೊಬಗು, ವಸಂತಾಗಮನ, ಸಾಗರದ ಸೊಗಸು, ಮಡಿಲ ತುಂಬಿದ ಗಿಡ, ಕನಸಿನಲ್ಲಿ ಕಂಡದ್ದು ಲತೆಯ ಸೊಕ್ಕು, ಕೆಂದಾವರೆಯ ಕೊಳ, ಚಿತ್ರಕಾರ, ಮುಗುಳು ಮಲ್ಲಿಗೆ, ಕಿರುತೆರೆ, ಸಾಗರ, ಮಲೆನಾಡ ಸೊಗಸು, ಕಾಡುಹೂವು, ನಿತ್ಯವೂ ಬಂದ್ ಹೋಗುವನು ಇತ್ಯಾದಿ ಕವಿತೆಗಳು ಲಕ್ಷ್ಯವಾಗಿ ನಿಲ್ಲುತ್ತವೆ. ನಿಸರ್ಗವು ಸ್ವಯಂ ಶಿಕ್ಷಣ ಪಡೆಯುವವನಿಗೆ ಆದಿಗುರುವಾಗಿ ನಿಲ್ಲುವ ಮಿಡಿತದತ್ತ ಈ ನಿಟ್ಟಿನ ಕವಿತೆಗಳು ಭಾವಸ್ಪಂದನ ನೀಡಿ – ಬದುಕಿನ ಪಾಠಶಾಲೆಯಲ್ಲಿ ಪ್ರಕೃತಿಯೇ ಗುರುವೆಂಬುದುನ್ನು ಮನದಟ್ಟು ಮಾಡಿಸಿ, ಸ್ವಭಾವ ದರ್ಶನದಲ್ಲಿ ಪ್ರಕೃತಿಯ ಪಾತ್ರ ದೊಡ್ಡದೆಂಬ ಮಾತಿಗೆ ಅರ್ಥವನ್ನೊದಗಿಸುತ್ತವೆ, ನೋಡಿ–

"ಬೆಳೆಯ ಕೊಟ್ಟು ಕಳೆಯ ತೊಟ್ಟು
ಭೂಮಿತಾಯಿಯ ತಣಿಸಿತು" (ಮಳೆಯ ಸೊಬಗು)

"ವರುಷ ವರುಷವು ಚಿಗುರಿ ತರುವ
ನನ್ನ ಗಿಡವೇ ಸುಂದರ" (ಮಡಿಲ ತುಂಬಿದ ಗಿಡ)

"ನದಿಯಾಳದಲಿ ಕರಗಿತು ತೊರೆಯು
ಸೂರೆ ಸೂರೆಯಾಗಿ ಮರೆಯಲ್ಲಿ!" (ಕಿರುತೊರೆ)

"ಜಗಕೆ ಚೇತನದ ಚಿಲುಮೆ ನೀನು
ನೀನು ಹೋದರೆ ಮತ್ತೆ ನಿಟ್ಟುಸಿರು"
ಬರಿ ಬಿಸಿಲು ನೋಡು;
ನಿತ್ಯವು ಬಂದು ಹೋಗು ವಸಂತವೇ
ಜೀವ ಸಂಕುಲವ ಹರಸು, ತಣಿಸು" (ನಿತ್ಯವೂ ಬಂದು ಹೋಗು ವಸಂತ)

ಎಂಬಂತಹ ಪಾದಗಳನ್ನು ನೆನೆಸಿಕೊಂಡಾಗ ಬದುಕಿನಲ್ಲಿ ನಿಸರ್ಗದ ಪಾಠಗಳು ಎಂತಹ ಚೇತೋಹಾರಿಯಾಗಿ ನಿಲ್ಲುತ್ತವೆಯೆಂಬುದರ ನಿಲುವಿಗೆ ಪ್ರಮಾಣವು ಒದಗಿಬರುತ್ತದೆ.

ಹೀಗೆ ನಿಸರ್ಗದ ಹರಿತ್ತಿನಿಂದ ಬದುಕನ್ನು ಬೆಳಗಿಸಿಕೊಳ್ಳುತ್ತ ಸಾಗುವ ನಿಟ್ಟಿನಲ್ಲಿ ಜೀವನವೊಂದಕ್ಕೆ ಮತಗಳ ವಿಚಾರದಲ್ಲಿ ಸಮಗೌರವದ ನಿಲುಕು, ಮೂಢನಂಬಿಕೆಗಳನ್ನು ನಿವಾರಿಸಿಕೊಳ್ಳುವತ್ತ ಧೇನಿಕೆ, ಸಾಮಾಜಿಕ ಕಳಕಳಿಯಲ್ಲಿರುವ ಮಾನವಾಂತಃ ಕರುಣೆ, ವ್ಯಕ್ತಿ ಗೌರವದ ಅನುಕಲ್ಪನೆ, ಕೋಮು ಸೌಹಾರ್ದತೆ, ಇತ್ಯಾದಿಗಳು ಸತ್ವದ ಕೂಡಿಕೆಯಾಗಬೇಕು. ಆಗ ಜೀವನವು ಸಮಾಜಜೀವಿಯಾಗಿ ನೆಮ್ಮದಿಯ ಸ್ಥಿತಿಯನ್ನು ಪಡೆಯಲು ಸಾಧ್ಯ. ಈ ಸಾಧ್ಯತೆಯ ಕಡೆಗೆ ಕವಿಯತ್ರಿಯ ತಿಳಿ ಮನಸ್ಸಿನಲ್ಲಿ ಮೂಡಿಬಂದ ಭಾವಗಳನ್ನು ಅವರ–" ದೇವರೇ ನೀನು ಯಾರು? "ನನ್ನ ಪ್ರಶ್ನೆ", "ಬ್ರಹ್ಮಚಾರಿಯ ಪುತ್ರ", "ನಗರದ ಬದುಕು ಮತ್ತು "ಮನುಷ್ಯ ಜಾತಿ ಒಂದೆ" ಎಂಬಂತಹ ಪದ್ಯಗಳು ಅರ್ಥಪೂರ್ಣವಾಗಿ ಅಭಿವ್ಯಕ್ತಗೊಳಿಸುತ್ತ ಮನುಷ್ಯನನ್ನು ವಿಶ್ವಧರ್ಮದ ಸಾಧಕನನ್ನಾಗಿಸಲು ಮಾರ್ಗದರ್ಶನ ಮಾಡುತ್ತವೆ, ಮತ್ತೆ ದೇವರ ಬಗ್ಗೆ ಸುತ್ತಿಕೊಂಡಿರುವ ತರ್ಕದ ಬಿಳಿಲುಗಳಲ್ಲಿಯ ವಿಚಾರವು ಸರಳಗೊಳ್ಳುವ ಕಡೆಗೆ ಅಭಿವ್ಯಕ್ತಿಯು ಸುಗಮವಾಗಿರು ವುದನ್ನು ಕಾಣುತ್ತೇವೆ. ಪುರಾಣದ ಕಥೆಗಳಲ್ಲಿ ತುಂಬಿಕೊಂಡಿರುವ ನಿಸರ್ಗದ ಅಂಶಗಳಲ್ಲಿಯ ಜೀವನ ಸತ್ಯವನ್ನು ಧ್ವನಿ ರಮ್ಯತೆಯಲ್ಲಿ ಚಿತ್ರಿಸುವಲ್ಲಿರುವ ಶೈಲಿತ ಸೊಗಸಿನಲ್ಲಿಯ ಸ್ವಾದದಿಂದ ಸಮಾಧಾನ ಪಡೆಯುತ್ತೇವೆ.

ಸಂಸ್ಕೃತಿ, ನಾಗರಿಕತೆ ಮತ್ತು ನವನಾಗರಿಕತೆಗಳಲ್ಲಿಯ ವ್ಯತ್ಯಾಸವನ್ನು ಕಂಡು ಬದುಕುವ ಕಲೆಗೆ ತಾರತಮ್ಯದ ಬಗೆಯನ್ನು ಬಿಚ್ಚಿಕೊಳ್ಳುತ್ತವೆ. ಈ ಮಾತುಗಳ ಮಿಡಿತದಲ್ಲಿಯ ರಸಗ್ರಹಣಕ್ಕೆ ಕೆಳಗಿನಂತೆ ಸಾಲುಗಳನ್ನು ಉದ್ದರಿಸಲು ಸಾಧ್ಯ.

**"ನಿನ್ನ ಸೃಷ್ಟಿಗಿಂತಲೂ, ನಿನ್ನ ಸೃಷ್ಟಿಯದೇ ಚಿಂತೆ ನಿನಗೆ.**
**ನಾನು ಮೇಲೆ ನೀನು ಕೆಳಗೆ, ಮತಾಂಧತೆಯಲಿ ಹೊಡೆದಾಟವು**
**ದೇವಾಲಯ, ಮಸೀದಿಗಳಲ್ಲಿ ರಕ್ತದೋಕುಳಿ ನಡೆದುವು,**
**"ನಿನ್ನದೆ ಸೃಷ್ಟಿಯೆಂದ ಮನುಜ ನರಬಲಿಗಳ ಕೊಟ್ಟರು**
**ನಿನ್ನೊಲುಮೆಗಾಗಿ ಹಂಬಲಿಸಿ ನಿನ್ನದೇ ಸೃಷ್ಟಿಯ ಕೊಲ್ಲುವರು"**
**(ದೇವರೇ ನೀನು ಯಾರು?)**

"ಮೆತ್ತನೆಯ ಹಾಸುಗೆಯ ಒತ್ತೊತ್ತಿ ಬೇನೆಯಾಯ್ತು" (ನಗರದ ಬದುಕು)

ಇಂಥ ಕಡೆ ಚಿಂತನಗಳು ವಚನಗಳಾಗಿ ಲಯಬದ್ಧತೆಯಲ್ಲಿ ಮನಸ್ಸನ್ನು ಮಿಡಿದು ಆವರ್ತಗೊಳ್ಳುತ್ತವೆ. ತಿಳಿವಳಿಕೆಯ ಸತ್ಯದೆಡೆಗೆ ಧಾವಿಸುವಂತೆ ಮಾಡುತ್ತವೆ. ಈ ಸಂದರ್ಭದಲ್ಲಿ ಕವಯತ್ರಿ ದರ್ಶನಚಿತ್ತರಾಗಿರುತ್ತಾರೆ.

ನಿಸರ್ಗವು ನೀಡುವ ದರ್ಶನದಲ್ಲಿ, ತಾಯಿಯು ಸಂಭ್ರಮಿಸುತ್ತಾಳೆ. ಆ ತಾಯಿಯ ನೆನಪಿನಲ್ಲಿ ಆಗ ಅಗಾಧವಾದ ಅಮೃತ ಘಳಿಗೆಗಳು ಸಾಕಾರವಾಗಿ ವಾತ್ಸಲ್ಯದ ಕಡಲಲ್ಲಿ ಬದುಕು ಪಾವನಗೊಳ್ಳುತ್ತದೆ. ಪುರುಷಾರ್ಥ ಸಾಧನೆಯಲ್ಲಿ ವೃಷ್ಟಿಯು ನೆಮ್ಮದಿಯನ್ನು ಪಡೆಯಲು ಸಾಧ್ಯವಾಗುತ್ತದೆ. ಇಂತಹ ಅದಮ್ಯ ಭಾವನೆಗಳು– ಅಮ್ಮ, ಜೋಗುಳ, ಅಮ್ಮನ ಹರಕೆ ಎಂಬ ಕವಿತೆಗಳಲ್ಲಿ ಉಕ್ಕಿ ಉಕ್ಕಿ ಬರುತ್ತಿರುವಾಗ ಮಾತೃವಾತ್ಸಲ್ಯ ದೀಪ್ತಿಯಲ್ಲಿ ಪ್ರಶಾಂತತೆಯು ತಂಪಾಗಿ ಪರಿಣಮಿಸುತ್ತದೆ ಮತ್ತು ಕವಯತ್ರಿಯು ತುಂಬಿಕೊಂಡ ತಾಯಿಯ ಕರುಳಿನ ಮಿಡಿತಗಳು ಮನಸ್ಸಿನ ಕಣ್ಣಿಗಷ್ಟೆ ಅಲ್ಲ ಹೊರಗಿನ ಕಣ್ಣುಗಳಿಗೂ ಅನುಭವಕ್ಕೆ ಬರುತ್ತವೆ. ಆ ಅನುಭವದ ಒಳದನಿಯಲ್ಲಿ ಆಕೆ ಮನದುಂಬಿ ಮಕ್ಕಳ ಆಟದಲ್ಲಿ ಜಗವಮರೆಸುವ ಕಲೆಯಿದೆಯೆಂದೂ, ಅವರ ನೋಟವೆಲ್ಲ ಸೊಬಗಿನ ಖಣಿಯೆಂದು ಹಾರೈಯಿಸುತ್ತಿರುವ ಭಾಷೆಯಲ್ಲಿ ಕೇಳಿ ಬರುತ್ತಿರುತ್ತದೆ. ಆ ಭಾಷೆಯಲ್ಲಿ ತಾಯಿಯ ಮಮತೆಯು ಅನುಭವವಾಗಿ ಪ್ರಕೃತಿಯೇ ತಾಯಿಯಾಗಿ ಆಕೆ ವಿರಾಟತೆಯನ್ನು ಮೆರೆಯುತ್ತಿರುತ್ತಾಳೆ. ಇಂತಹ ಅದಮ್ಯ ಅನುಭಾವವನ್ನು ಪಡೆದ ಕವಯತ್ರಿಗೆ ತನ್ನ ಕಾವ್ಯ ಶಕ್ತಿಯಿಂದ ಮಕ್ಕಳ ಮನಸ್ಸನ್ನು ಸಂಸ್ಕಾರಗೊಳಿಸಲು ಉದ್ಯುಕ್ತವಾಗುತ್ತದೆ. ಏಕೆಂದರೆ ಪ್ರಪಂಚದಲ್ಲಿ

ಮಾನವ ವಿಕಾಸದ ಉಜ್ವಲ ಭವಿಷ್ಯಕ್ಕೆ ಮಕ್ಕಳೇ ಸಂಪತ್ತು ಹಾಗಾಗಿ ಆ ಮಕ್ಕಳಿಗೆ ನಿಸರ್ಗವು ತುಂಬಿಕೊಂಡ ಒಂದೊಂದು ವಸ್ತು ಕೂಡ ಜ್ಞಾನವರ್ಧನೆಗೆ ಕಾರಣವಾಗಿ ನಿಲ್ಲುತ್ತವೆ. ಅವುಗಳ ಸಾಕಾರದ ಸಂಸ್ಪರ್ಶತೆಯಲ್ಲಿ ಬಳಕೆಯಲ್ಲಿ ಆ ಮಕ್ಕಳೆಲ್ಲರ ವ್ಯಕ್ತಿತ್ವ ವಿಕಾಸ ಖಚಿತ. ಈ ತತ್ವದ ತಳಹದಿಯಲ್ಲಿ ಡಾ.ಸಬಿತಾ ಅವರು ಕಾಗೆ ಕೋಗಿಲೆ, ಕಟುಕನ ಬದುಕು ನನ್ನ ಮುದ್ದುಕಂದ, ಹರಕುಬಾಯಿರಂಗ, ಬಸ್ಸು ಮೊಗಚಿತು, ದೇವನೆಂದರಾರು, ದೇವರು, ರಕ್ಕಸನೆಂದರೆ ಯಾರಮ್ಮ, ಅಳುವ ಚಿಹ್ನೆ ಎಂಬಂತಹ ಕವನಗಳಿಗೆ ಜೀವ ತುಂಬಿದ್ದಾರೆ. ಈ ಜೀವ ಕಳೆಯಲ್ಲಿ ವಸ್ತುಜ್ಞಾನವು, ಮುಗ್ಧವಾದ ಮುದ್ದು ಭಾಷೆಯಲ್ಲಿ, ಮಗುವಿನ ಕುತೂಹಲಗಳನ್ನು ತಣಿಸುವ ಸಹಜ ಉತ್ತರಗಳಿಗೆ ಬೆಳಕನ್ನು ಹರಿಸಿದ್ದಾರೆ. ಆ ಬೆಳಕಿನ ಹರಿಯಲ್ಲಿ ಜೀವನಕ್ಕೆ ಬೇಕಾದ ತತ್ವನೀತಿಗಳು ಕಥನಶೈಲಿಯಲ್ಲಿ ಇನ್ನಷ್ಟು ಆಪ್ಯಾಯಮಾನವಾಗಿ ಪರಿಣಮಿಸುತ್ತವೆ. ಆಗ ಮಗುವಿನ ಮನಸ್ಸು ಪ್ರಬುದ್ಧತೆಯ ಪಕ್ವತೆಯ ದಿಸೆಯಲ್ಲಿ ಅರಳತೊಡಗುತ್ತದೆ. ಇಂಥಲ್ಲಿ ಬದುಕಿನ ಆಶಯಗಳು ಜೀವನದಿಯಾಗಿ ಹರಿದು ಬದುಕು ಅವಿನಾಶಿನಿ ಎಂಬುದನ್ನು ಸಾರ್ಥಕಗೊಳಿಸುತ್ತದೆ. ಆ ಸ್ವಾರ್ಥದಲ್ಲಿ ಪ್ರಕೃತಿಯ ಸ್ನೇಹದ ಕೊಡುಗೆ ಅಸದಳ. ಆ ಅಸದಳತೆಯಲ್ಲಿನ ಬೆಳಕನ್ನು ಕವಿವಾಣಿ ಹಂಚುವ ರೀತಿ ಅರ್ಥಪೂರ್ಣ ಮುಗ್ಧತೆಯನ್ನು ಬಿಡಿಸಿಡುವ ಸಾರ್ಥಚಿತ್ರಧ್ವನಿ ಅಲ್ಲಿ;

**"ನನ್ನದೆಲ್ಲವನ್ನು ಕೊಟ್ಟ; ಅವನ ಸ್ನೇಹ ಗಳಿಸುವೆ**
**ನಾನು ಅವನ ಜೋಡಿಯಾಗಿ ಚಿನ್ನಿದಾಂಡಾಡುವೆ**
**ಕಾಡಲಾರೆ ಬೇಡಲಾರೆ, ಅವನು ನನ್ನ ಒಳಗಿರೆ" (ದೇವನೆಂದರಾರು)**

**"ಅಪ್ಪನ ಕಣ್ಣು ಕೆಂಪಗಿದೆ – ಗಟಗಟ ನೀರನು ಕುಡಿಯುತ್ತಾನೆ**
**ಕೋಪ ಬಂದರೆ ಹೊಡೆಯುತ್ತಾನೆ, ಬೇಗ ಹೇಳಮ್ಮ**
**ಅಪ್ಪನೂ ರಕ್ಕಸನಾಗುವ ಲಕ್ಷಣ ಬಂತೇನಮ್ಮಾ" (ರಕ್ಕಸನೆಂದರೆ ಯಾರಮ್ಮ!)**

ಹೀಗೆ ಮಗುವಿನ ಮುಗ್ಧತೆಯನ್ನು ಅರಳಿಸುತ್ತ ಸೆಳೆದ ಕವಯತ್ರಿಯ ಮನಸ್ಸು, ಋತು ಸಹಜತೆಯಲ್ಲಿ ತುಂಬಿಕೊಂಡ ಹಬ್ಬಗಳು, ಜೀವನ ತೃಪ್ತಿಯ ಸಂಕೇತವಾಗಿ ಬರುವುದನ್ನು ಸ್ವಭಾವೋಕ್ತಿಯಲ್ಲಿ ಸಹಜಪ್ರಾಸದೊಡನೆ ಹಾಡಾಗಿ ಹರಸುವ ರೀತಿಗೆ ಸಹೃದಯನು ಒಲಿದು ಬಿಡುತ್ತಾನೆ. ಮತ್ತು ಕವಿಯತ್ರಿಯು ಬದುಕಿನ ನೆಮ್ಮದಿಯನ್ನೇ ಸುಗ್ಗಿಯ ಕುಣಿತದ ತಾಳ. ಸಂಗೀತಕ್ಕೆ ಇಳಿಸುವ ಕಲೆಗೆ ಮಾರುಹೋಗಿ ಆನಂದ ಪ್ರಾಪ್ತಿಯನ್ನು ಪಡೆದು ಧನ್ಯನಾಗುತ್ತಾನೆ. ಈ ವಿಚಾರಕ್ಕೆ ಸ್ವರೂಪಾಗಿ ನಿಲ್ಲುವ ರಸದಾಣಗಳನ್ನು "ಯುಗಾದಿ ಬಂತಂತೆ" ಮತ್ತು 'ಹೊಸವರುಷ' ಎಂಬಂತಹ

ಕವನಗಳಲ್ಲಿ ಗುರುತಿಸಲು ಸಾಧ್ಯವಿದೆ.

"ಹೊಸತನೊಂದ ಕೊಟ್ಟು ಹೋಗು
ಹಳೆಯದನ್ನು ಹೊತ್ತು ಹೋಗು
ಬರಿದೆ ಬಂದು ಹೋಗುತಿರುವೆ
ವರುಷಕೊಮ್ಮೆ ಭೂಮಿಗೆ

ನಿನ್ನ ಬರುವಿಗಾಗಿ ಮಾವು
ಹಸಿರು ಚಿಗುರು ತಂದಿದೆ
ನಿನ್ನ ಬರುವ ತಿಳಿಸಲೆಂದು
ಹಕ್ಕಿಗಾನ ಹಾಡಿದೆ" (ಯುಗಯುಗಾದಿ ಬಂತಂತೆ)

"ಬಿನ್ನಾಣವ ತೋರುತಿರು"
ನಿತ್ಯಸುಖ ಸೌಭಾಗ್ಯ ಬೀರು" (ಹೊಸ ವರುಷ)

ಇಂತು ಹಬ್ಬಗಳು ಜೀವನ ತೃಪ್ತಿಯ ಸಾಕಾರ ಸಂಕೇತವೆಂದು ಮನನ ಮಾಡಿಕೊಂಡ ಕವಯತ್ರಿಯು ಬದುಕನ್ನು ತನ್ನ ದಿವ್ಯ ದರ್ಶನದ ಕ್ಷ ಕಿರಣಕ್ಕೆ ಪೂರ್ಣ ಅಳವಡಿಸಿ, ಆ ಬೆಳಕಿನ ಹೊಳಲಲ್ಲಿ ಬದುಕಿನ ಪದರುಗಳನ್ನೆಲ್ಲ ಸ್ಪಷ್ಟಗೊಳಿಸುವ ಚಿತ್ರಗಳನ್ನು ಧನ್ಯಾತ್ಮಕವಾಗಿ ನೀಡಲು ಹವಣಿಸಿದ್ದು, ಅವರು ತುಂಬಿಕೊಂಡ ಜೀವನ ಪ್ರೀತಿಯನ್ನು ಬಹಿರಂಗ ಪಡಿಸಿದೆ. ಅಲ್ಲಿ ತುಂಬಿಕೊಂಡ ವಿಶ್ಲೇಷಣಾತ್ಮಕ ದೃಷ್ಟಿಯು ಕಾವ್ಯಸೃಷ್ಟಿಯಲ್ಲಿಯ ಬ್ರಹ್ಮಸೃಷ್ಟಿಯ ಗುಟ್ಟಿನ ಕವಾಟವನ್ನು ತೆರೆದು ಬಿಡುವ ಸಾಹಸವು ಅಲ್ಲಿ ಅಡಗಿರುವುದನ್ನು ಕಾಣುತ್ತೇವೆ.

ಭಾವಜೀವನ, ಜೀವನದಿ, ಹೆದರಿಕೆ ನನ್ನ ಪಯಣ, ಬಿದ್ದಿದ್ದು ಗಬ್ಬುಗುಂಡಿ, ನಡೆದ ದಾರಿ, ಬಂಧನ-ಸಂಕೋಲೆ, ಬದುಕು ಯಾವುದೂ ನಿಜವಲ್ಲ ಎಂಬಂತಹ ಕವಿತೆಗಳು ನಮ್ಮ ಕಣ್ಣು ಮುಂದೆ ಸಾಲಾಗಿ ನಿಲ್ಲುತ್ತವೆ. ಅಲ್ಲಿ ಕವಯತ್ರಿಯು ಬ್ರಹ್ಮಜ್ಞಾನದಲ್ಲಿಯ ತಿರುಳನ್ನು ನೀಡುವ ಪ್ರಯತ್ನ ಮಾಡಿರುವುದನ್ನು ಮೆಲೆಯುತ್ತ ಅಭಿನಂದಿಸಬೇಕಾಗುತ್ತದೆ;

"ಉಸಿರಲ್ಲಿ ಹಸಿರಾದ ನಿನ್ನ ಕಣಜವ ಕಂಡೆ

ಬದುಕಲ್ಲಿ ಸವಿಜೇನ ಸವಿದುಕೊಂಡೆ" (ಭಾವಜೀವನ)

"ಅವಳಿ ಜವಳಿಗಾಗಿ, ಬದುಕು ಸಾವುಗಳೆರಡು"
ಜೀವ ಜೀವಿಗಳೆಲ್ಲಾ ದಾರಿ ತೋರಿತ್ತು" (ಜೀವನದಿ)

"ಸುತ್ತಲೂ ಬೇಲಿಯನು ಬಿಗಿಯುತ್ತೇನೆ
ರಕ್ಷಣೆಗಾಗಿ ಅಲ್ಲಿ,
ಬದುಕಬೇಕೆಂಬ ಆಸೆಗಾಗಿ" (ಹೆದರಿಕೆ)

"ಮೆಲ್ಲನೆದ್ದು ನಡೆದುಹೋದೆ
ನುಡಿಯಲಿಲ್ಲ ಯಾರಿಗೂ,
ನಡೆಯಲಿಲ್ಲ ಮುಂದಕೂ" (ಬಿದ್ದಿದ್ದು ಗಬ್ಬುಕಣಿವೆ)

"ದೇವನ ಒಡಹುಟ್ಟು ತಾನೆಂದು ಮರೆಯದಿರು
ಜೀವ ಜೀವಿಗಳಲ್ಲೂ ದೇವನಿರುವನು ತಿಳಿನೀನು;
ಮಿಥ್ಯೆಯ ಸೋಲ್ಲೊಂದು ಸತ್ಯವು ಮತ್ತೊಂದು
ಯಾರಿಗೂ ಯಾರಿಲ್ಲ, ಯಾವುದೂ ನಿಜವಲ್ಲ" (ಯಾವುದೂ ನಿಜವಲ್ಲ)

ಇಂಥಲ್ಲಿ ಬದುಕಿನ ತತ್ವಜ್ಞಾನವು, ಅರ್ಥದ ಎಳೆಎಳೆಯನ್ನು ಬಿಡಿಸಿಕೊಂಡು ನಿಂತಿರುವುದೆಲ್ಲ ಕವಯತ್ರಿಯ ಸಹಜ ಲೋಕಜ್ಞಾನದಿಂದ ಮುಂದೆ ಕರೆದುಕೊಂಡು ಅಲೌಕಿಕ ಜ್ಞಾನಭಂಡಾರದ ಮುಚ್ಚಳವನ್ನು ಸರಿಸುವಂತೆ ಮಾಡುತ್ತದೆ. ಆಗ ಅಲ್ಲಿಯ ಬೆಳಕಿನ ಕಿರಣಗಳು ಸಹೃದಯರನ್ನು ತಾಕಿ, ಅವರಲ್ಲಿಯ ಜ್ಞಾನದ ಕಣಜವು ಮೈದೆರೆದುಕೊಂಡು ಅವರವರ ಅನುಭಾವದಲ್ಲಿ ಸಾರ್ಥಕಗೊಳ್ಳಲು ಮುಂದು ನೀಡಿದೆ.

ಈ ಬಗೆಯ ಮುಂದು ನೀಡುಗಳನ್ನು ಸಾಧಾರಣವಾಗಿ ಡಾ. ಸಬಿತಾ ಅವರು ತಮ್ಮ ಎಲ್ಲ ಕವನಗಳಲ್ಲಿ ಬಯಲುಗೊಳಿಸಿದ್ದಾರೆ. ಈ ಸಾಧನೆಗೆ ಕಾರಣ ಅವರು ತಮ್ಮ ಸ್ವ ಬದುಕು ತುಂಬಿಕೊಂಡ ಭಾವ ಸಂಪದವನ್ನೆಲ್ಲ ವಿವಿಧ ಕವನಗಳಲ್ಲಿ ಅಳವಡಿಸಿಕೊಂಡು ಅದನ್ನೆಲ್ಲ ಪ್ರಪಂಚದ ಉಳಿದ ಬದುಕುಗಳ ನಿಕಷಕ್ಕೆ ಸಂಸ್ಕರಿಸುವ

ಲೋಕ ಒಪ್ಪುವ ದಿಸೆಯಲ್ಲಿ ತಮ್ಮ ಕಾವ್ಯದಲ್ಲಿ ಚಿಂತಾರತ್ನ ಗಳನ್ನಾಗಿಸಿ ಹೊಳೆಯಿಸುವ ಅವರ ತಪಸ್ಸು ಅಸಾಧಾರಣ. ಈ ಮಾತಿಗೆ ಬರವಿಲ್ಲ. ಅವರ 'ನನ್ನ ಕವನಗಳು' 'ಕವಿತೆ ಬರೆವ ಕವಿಗೆ', 'ನನ್ನೂರ ನೆನಪು', 'ನನ್ನ ಮುದ್ದಿನ ಕಂದ' ಎಂಬಂತಹ ಕವಿತೆಗಳು. ಇವು ಥಾಳಾಗಿ ಕವಿಕಾವ್ಯದ ಆದರ್ಶಗಳಿಗೆ ಕ್ಷಿತಿಜಗಳಾಗುತ್ತವೆ.

**"ಸರಳ ಸುಂದರ ಕವಿತೆಯ ಬರೆದು ನೀ ಮುಗಿಸಿಬಿಡು**
**ಓದುಗರು ನಾವೆಲ್ಲ, ನಿನ್ನ ನೆನವೆವು ಅಂದು"** (ಕವಿತೆ ಬರೆವ ಕವಿಗೆ)

**"ಏನು ಹೇಳಲಿ ನಿನಗೆ, ಎಲ್ಲವೂ ಚಂದವೆ**
**ನೀನೆ ಬಂಗಾರ ಸಿಂಗಾರ ಮುತ್ತಿನಾ ತೋರಣವು"**(ನನ್ನ ಮುದ್ದಿನ ಕಂದ)

ಹೀಗೆ ಬದುಕನ್ನೇ ಕಾವ್ಯಧ್ವನಿ ಸಂಪತ್ತಾಗಿಸಿಕೊಂಡು, ಕಾವ್ಯಧ್ವನಿಯಲ್ಲಿ ಬದುಕಿನ ಸಾರಸರ್ವಸ್ವವನ್ನು ಅಡಗಿಸಿಕೊಳ್ಳುವ ತಪಸ್ಸು ಹೆಸರಿಡದ ಕವನ ಸಂಕಲನದಲ್ಲಿ ನಿರಂತರ ಸ್ರೋತವಾಗಿ ಹಬ್ಬಿಕೊಂಡು ಸಾಗಿರುವುದು, ಕವಯತ್ರಿಯ ಚಿಂತನದಲ್ಲಿ ಇರುವ ತ್ರಿಕಾಲಾಬಾಧಿತ ಜೀವನ ಸಂವೇದನಗಳೆಲ್ಲ ಸ್ವಾನುಭವದ ಪಾತ್ರೆಯಲ್ಲಿ ಶೋಧಗೊಂಡು, ಸೋಸಿ ಕಾವ್ಯವಾದ ರೀತಿಗೆ ಸದಾ ಮೆಚ್ಚಿಕೆಯು ಅವರಿಗೆ ಹಾಸಲಾಗಿದೆ. ಇದು ಅವರ ಕಾವ್ಯ ದರ್ಶನವು ತುಂಬಿಕೊಂಡ ಸಾಧನಾ ಸ್ವರೂಪ ಆ ಸ್ವರೂಪವೆಲ್ಲ 'ಅಜ್ಜಿ ಹೊರಟಳು' ಎಂಬಲ್ಲಿ ಪೂರ್ತಿ ಆಕೃತಿ ಪಡೆಯಲು ಪ್ರಯತ್ನಿಸಿ ನಮ್ಮನ್ನು ಮೂಕಗೊಳಿಸಿದೆ. ಇಡೀ ಕವಿತೆ ಎಲ್ಲಿಯೂ ಸೋಲದೆ ಬದುಕಿನ ಗೀತಾರ್ಥವಾಗಿ 'ಹೆಸರಿಡದ ಕವನ' ವಾಗಿ ಎಲ್ಲ ಹೆಸರಿಗೂ ಒಡಲಾಗಿ ಪರಿಣಮಿಸಿರುವುದು ಕವಿಯತ್ರಿಯ ಕಾವ್ಯಸಾಧನೆಯ ಗೌರವದ ಘಟ್ಟ.

ಸಾಮಾನ್ಯವಾಗಿ ಇಂತಹ ಗೌರವದ ಘಟ್ಟಗಳು ಕವನ ಸಂಕಲನದಲ್ಲಿ ಸಾಕಷ್ಟು ಕರಾವಳಿಗೊಂಡಿವೆ. ಆ ಗೌರವದ ಘಟ್ಟಗಳು ಕೇರಳ ಮತ್ತು ದಕ್ಷಿಣ ಕರ್ನಾಟಕದ ಕರಾವಳಿಯಲ್ಲಿ ಉಸಿರನ್ನು ಸಾಕಾರಗೊಳಿಸಿಕೊಂಡು, ಮೈಸೂರಿನಲ್ಲಿ ಆ ಉಸಿರಿಗೆ ಶೈಕ್ಷಣಿಕ ಅರ್ಥನೀಡಿ, ರಾಯಚೂರು, ಚಿತ್ತಾಪುರ, ಕಲಬುರಗಿ, ಕಮಲಾಪುರ, ಹೆಗ್ಗಡದೇವನಕೋಟೆ, ಬೆಂಗಳೂರಿನ ವಲಯಗಳಲ್ಲಿ ಬದುಕಿಗೆ ಅರ್ಥ ನೀಡಿ 01-02-2011 ರವರೆಗೆ ಸಾಗಿಬಂದ ಡಾ.ಸವಿತಾ ಮರಕಿಣಿ ಅವರು ಅದೇ 01-02-2011 ರಿಂದ ವಿಸ್ಮಯದ ಆಚೆಯ ವಿಸ್ಮಯದಲ್ಲಿಯೂ ತಮ್ಮ ಜಾಡು ಮೂಡಿಸಲು ಅದೃಶ್ಯ. ಆದರೆ ಅವರ ನೆನಪು ಸದಾ ಹಸಿರು. ಈ ನೆಲದ ಇರುವಿನಲ್ಲಿ ಅನುಭವಕ್ಕಿಂತ ನೆನಪೇ ಮಿಗಿಲಾದದ್ದು. ಆ ನೆನಪಿನ ಹೆಸರು ಹಸಿರು ಕ್ರಾಂತಿಗೆ ಸ್ಫೂರ್ತಿ. ಅಲ್ಲಿ

ಹರಿತ್ತಿನ ಸಾರ್ವಕಾಲಿಕ ಇರುವು.

ಈ ಇರುವು ತಾನೊಂದು ಮೌಲಿಕದ ಇರುವು. ಇದನ್ನು ಕಾವ್ಯವಾಗಿಸಿ ನಿಂತ ಅದ್ಭುತ ಬದುಕು. ಡಾ ಸಬಿತಾ ಮರಕಿಣಿ ಅವರದು. ತಮ್ಮ ಬದುಕನ್ನು ಮತ್ತು ತಮ್ಮ ಕಾವ್ಯದ ಬದುಕನ್ನು 20ನೆಯ ಶತಮಾನದ ನವೋದಯ ಸಾಹಿತ್ಯ ಕಾಲದ ಸೊಗಸುಗಳನ್ನೆ ಸೇರಿದ್ದೇ ಜನಾದರಣೆಯ ನವೋದಯ ರಮ್ಯ ಸಾಹಿತ್ಯದ ಗೌರವದೆ ಬಳಸಿಕೊಂಡವರು. ಆ ಸೊಗಡುಗಳೆಲ್ಲ ಆ ಕ್ಷೀರಸಾಗರದ ನಾದದ ತೆರೆಗಳು ಆ ಶಿಖರ ಗೌರಿಶಂಕರ. ಅಲ್ಲಿ ಬದುಕಿನ ಸವಿಯನ್ನು ನಿಲುಕಿಸಿ ಬದುಕಿಗೆ ಸಂಜೀವಿನಿ ಶಕ್ತಿಯಾಗಿ ನಿಲ್ಲುವ ಸಾಹಿತ್ಯ ಸೃಷ್ಟಿಗೆ ಪ್ರೇರಣೆಯ ಜನಸ್ರೋತ್ತವಾಗಿದೆ. ಅಲ್ಲಿರುವ ಆ ಕಾಲ ಶಕ್ತಿಯಾಗಿ ಎಲ್ಲ ಇಳಿತುಗಳನ್ನು ತಮ್ಮ ಶೈಲಿಗೆ ಸಾಮರಸ್ಯಗೊಳಿಸಿಕೊಂಡು ಕೃತಿ ರಚನೆ ಮಾಡಿದವರು. ಆ ರಚನಾ ಶೈಲಿಯ ಶೀಲದಲ್ಲಿಯೆ ತಮ್ಮ ಕೊನೆಯ ಉಸಿರನವರೆಗೆ ಸಾಧನೆಯ ಸುಗ್ಗಿಯಾಗಿ ಸಂಭ್ರಮಿಸಿದವರು. ಅವರ ಈ ತರಹದ ಸಂಸ್ಕಾರಯುತ ಕಾವ್ಯಾಭ್ಯಾಸದ ಜೊತೆಗೆ ಆರೋಗ್ಯ ದೃಷ್ಟಿಯನ್ನು ಲೌಕಿಕ ಪರ್ವಗಳನ್ನು ತಮ್ಮಲ್ಲಿ ತುಂಬಿಕೊಂಡು ತಮ್ಮ ಅನುಭವದ ಕೊಟ್ಟಣದಲ್ಲಿ ಅವುಗಳಿಗೆ ಲೋಕಹಿತಕ್ಕೆ ಅನುವಾಗುವ ಸಾಚಾನೀಡಿ ತಾನೇ ಅಲ್ಲಿ ಸಾಮಾನ್ಯ ಬದುಕಿಗೆ ಸ್ವಾರ್ಥಕಾವ್ಯಧ್ವನಿಯಾದರು. ಅವರು ನವೋದಯದ ಕಾರ್ಯಶಕ್ತಿಯಲ್ಲಿರುವ ಅಂತಃಕರುಣೆಯನ್ನು ಮಿಡಿಸಿ ಕರುಳಿನ ಬಂಧನಕ್ಕೆ ಇಡೀ ಪ್ರಪಂಚವನ್ನು ಸಾಣೆಗೊಳಿಸಿದ ಮಾನವ ಪ್ರೀತಿಯ ಸಾಕಳಿಯನ್ನು ನಿರ್ಮಿಸಿದರು. ಆ ಸಾಕಳಿಗೆ ಜೋಡಿಗೊಳಿಸುವ ನಿರಂತರ ಕ್ರಿಯೆಗೆ ಇವರ ಕಾವ್ಯ ಸಂಪತ್ತು ಕೊರಕುಗಳಿಂದ ಅಲಿಪ್ತವಾಗಿ ಯಾರೂ ಹೆಸರಿಡದ ತಾವೇ ತಮ್ಮ ಹೆಸರನ್ನೇ ಅಲ್ಲೆಲ್ಲ ಕಾಣುವ ಅನಂತತೆಯಲ್ಲಿ ಏಕವಾಗಿರುವ ಜೀವನದರ್ಶನವಾಗಿ ಹೆಸರಿಡಿಸಿಕೊಳ್ಳದೆ ಸದಾ ಹಸುರಿನ ಹೆಸರಲ್ಲಿ ನಿರ್ಗುಣ ಬ್ರಹ್ಮಸ್ವರೂಪಿಯಾದ ಭಾವಗೀತೆಗಳು ಸಂಗ್ರಹಣಗೊಂಡಿದ್ದು, ಮನಸ್ಸನ್ನು ಸದಾ ಸಮೃದ್ಧಿ ನಮ್ರಗೊಳಿಸುತ್ತಿರುವ ನವೋದಯ ಭಾವಸ್ಪಂದನಗಳ ಈ ಸ್ಪಂದನಗಳಲ್ಲಿ ನಿತ್ಯ ನೂತನತೆಯು ಉದಯವಾಗುತ್ತಲೇ ಇರುತ್ತದೆ. ಈ ಮಾತಿಗೆ ಆದರ್ಶವಾಗಿ ನಿಂತ ಗೋವಿಂದಪೈ, ಪಂಜೆ ಮಗೇಶರಾಯರು, ಬಿ.ಎಂ.ಶ್ರೀ, ಶಾಂತ ಕವಿಗಳು, ಹುಯಿಲಗೋಳ ನಾರಾಯಣರಾಯರು, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ದ.ರಾ.ಬೇಂದ್ರೆ, ಕುವೆಂಪು, ಮಧುರ ಚೆನ್ನ, ರಸಿಕರನ್ನ, ವಿ.ಸೀತಾರಾಮಯ್ಯ, ಎಕ್ಕುಂಡಿ ಸುಬ್ಬಣ್ಣ, ಮೈಸೂರು ಮಲ್ಲಿಗೆ ಕವಿ ಕೆ.ಎಸ್.ಎನ್, ಪರಮೇಶ್ವರ ಭಟ್, ಎನ್ಕೆ, ಈಶ್ವರ ಸಣಕಲ್, ಕಡೆಂಗೋಡ್ಲು ಶಂಕರಭಟ್ರು, ಜಿ.ಎಸ್.ಶಿವರುದ್ರಪ್ಪ, ಸಿದ್ದಯ್ಯ ಪುರಾಣಿಕರ ಕಾವ್ಯ ಸಂಪತ್ತೆಲ್ಲ ಹೆಸರಿಡಿಸಿಕೊಳ್ಳದ ಜನತಾರ್ದ್ರ ದೃಷ್ಟಿಯ ಕವಿತಾ ಸಂಪತ್ತು. ಬದುಕಿನ ಲಯಬದ್ಧತೆಗೆ ಅಲ್ಲಿ ಗಮಕವು

ಶಬ್ದಾರ್ಥಗಳೆಲ್ಲ ಪಳಂಚನೆ ಮಿಂಚಿ ಬದುಕಿನಲ್ಲಿ ಅನುವಾದವಾಗುವುದಕ್ಕೆ ತಾಳವಾಗಿ, ತಾಳಕ್ಕೆ ತಕ್ಕಂತೆ ರಾಗ, ಧ್ವನಿಗೆ ಅವಕಾಶವಾಗಿ ಆನಂದ ಪ್ರಾಪ್ತಿಯು ಧಾವಂತಗೊಂಡಿದೆ. ಅದೇ ಸಾಲಿನಲ್ಲಿ ಮೌಲ್ಯಗಳನ್ನು ಅಳವಡಿಸಿಕೊಂಡು ನವೋದಯದಲ್ಲಿಯ ಗೌರವಘಟ್ಟದ ಧಾಟಿಗೆ, ಹೆಸರಿಡದ ಕವನ ಸಂಕಲನದ ಭಾಗಗಳನ್ನು ನೀಡಿದ ಕವಿಯತ್ರಿ ಡಾ. ಸಬಿತಾ ಮರಕಿಣಿ ಕಾವ್ಯಾನಾಮದಲ್ಲಿ ಸದಾಬಹಾರ! ಚಿರಂಜೀವಿ.

ಸದಾ ಹಸಿರಾಗಿರುವ ಹೆಸರಿನ ಡಾ. ಸಬಿತಾ ಮರಕಿಣಿ ಅವರ "ಹೆಸರಿಡದ ಕವನ ಸಂಕಲನ" ಪ್ರಸ್ತಾವನೆ ಎಂಬ ಹೆಸರಿನಲ್ಲಿ ನಾಲ್ಕು ಮಾತುಗಳ ತೋರಣ ಕಟ್ಟಿ ಒಳಗೆ ಬಾ ಓದುಗ, ಸಹೃದಯನಾಗಿ ಬದುಕು ಸೃಜನಗೊಳಿಸುವ ಧ್ವನಿಯ ಕೇಳು, ಎಂದು ಸ್ವಾಗತ ಕೋರುವ ಪವಿತ್ರ ಕಾರ್ಯಕ್ಕೆ ನನಗೆ ಆಹ್ವಾನ ನೀಡಿದ್ದ ನನ್ನ ಮೇಲೆ ಅವರ ಕಳ್ಳುಬಳ್ಳಿಯ ಮಲ್ಲಿಗೆ ತುಂಬಿ ಇಟ್ಟಿರುವ ತುಂಬು ವಿಶ್ವಾಸ, ಆ ವಿಶ್ವಾಸದ ಧ್ವನಿಯಾಗಿ ಪ್ರಾಸ್ತಾವಿಕ ಹೇಳಿದ್ದೇನೆ. ಇದನ್ನು ಸ್ವಾಗತಿಸುವ ಹಕ್ಕು ಶಾಂತಿಯ ತೋಟದಲ್ಲಿರುವ ಹಂಬಲಕ್ಕೆ ಒಳಪಟ್ಟ ಪ್ರಜೆಗಳೆಲ್ಲರದು. ಆ ಹಕ್ಕನ್ನು ಚಲಾಯಿಸುವವರ ಸತ್ಪಾತ್ರತೆಯು ನನ್ನ ಮಾತುಗಳನ್ನು ಆಲಿಸಿಕೊಂಡು ಅವರು ಮೌನವಾಗಿದ್ದರೂ ಸಾಕು ನನಗೆ ಸಮಾಧಾನ. ಅದರಿಂದ ಸೋದರಿ ಡಾ. ಸಬಿತಾ ಮರಕಿಣಿ ಅವರ ಆತ್ಮಕ್ಕೆ ತೃಪ್ತಿ.

**ನಮಸ್ಕಾರಗಳು.**

**ಪ್ರೊ॥ ವಸಂತ ಕುಷ್ಟಗಿ, ಎಂ.ಎ; ಡಿ.ಲಿಟ್**

# ಮುನ್ನುಡಿ – ೩

ಡಾ. ಸವಿತಾ ಮರಕಿಣಿಯವರ **'ಬಯಕೆ ಬಯಲು'** ಎಂಬ ಈ ಕವನ ಸಂಕಲನಕ್ಕೆ ಮುನ್ನುಡಿ ಬರೆದು ಕೊಡಬೇಕೆಂದು ಕವಯಿತ್ರಿಯ ಪತಿದೇವರೂ ಹಿರಿಯ ಸಾಹಿತಿಗಳೂ ಆದ ಡಾ. ಎಂ.ಬಿ. ಮರಕಿಣಿಯವರು ಕೇಳಿಕೊಂಡಿದ್ದಾರೆ. ಡಾ. ಸವಿತಾ ಅವರು ತೀರಿಕೊಂಡು ಮೂರು ವರ್ಷಗಳೇ ಕಳೆದವು. ಅವರು ಬರೆದಿಟ್ಟ ನೂರಾರು ಕವಿತೆಗಳು ಅಪ್ರಕಟಿತವಾಗಿ ಉಳಿದಿವೆ. ಅವನ್ನು ಪುಸ್ತಕ ರೂಪದಲ್ಲಿ ಹೊರತರಬೇಕೆಂಬ ಮಹದಾಸೆ ಡಾ. ಎಂ.ಬಿ. ಮರಕಿಣಿಯವರಿಗೆ. ಈಗ ಪ್ರಕಾಶಕರು ದೊರೆತಿದ್ದಾರೆ; ಪ್ರಕಟಿಸಿಯೇ ಬಿಡೋಣ, ಮುನ್ನುಡಿಯೊಂದನ್ನು ನೀವು ಬರೆದುಕೊಡಬೇಕು ಎಂದು ನನ್ನ ಬಹುಕಾಲದ ಆತ್ಮೀಯರೂ ಸಕುಟುಂಬಿಕರೂ ಆದ ಎಂ.ಬಿ. ಮರಕಿಣಿಯವರು ಒತ್ತಾಯಿಸಿದಾಗ ಆಗದು ಎನ್ನಲಾಗಲಿಲ್ಲ. ಸವಿತಾ ಮರಕಿಣಿಯವರ ಮರಣೋತ್ತರದಲ್ಲಿಯಾದರೂ ಅವರ ಕವನ ಸಂಕಲನ ಪ್ರಕಟವಾಗುವುದಾದರೆ ಆಗಲಿ ಎಂದು ಸಂತೋಷದಿಂದ ನಾಲ್ಕು ಮಾತು ಬರೆಯ ಹೊರಟಿದ್ದೇನೆ.

ಸವಿತಾ ಮರಕಿಣಿಯವರು ತಮ್ಮ ಕೆಲವು ಮೌಲಿಕ ಕೃತಿಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಹೆಸರಾಗಿದ್ದಾರೆ, ಅವರ 'ಹೆಸರಿಡದ ಕವನ ಸಂಕಲನ' ೧೯೯೯ರಲ್ಲಿ ಪ್ರಕಟವಾಯಿತು. ಹವಿಗನ್ನಡದಲ್ಲಿರುವ ಕಾದಂಬರಿ 'ಪಾಮಕ್ಕನ ಸಂಸಾರ' ೨೦೦೪ರಲ್ಲಿ ಬೆಳಕಿಗೆ ಬಂತು. ಅನಂತರ ಇನ್ನೆರಡು ಹವಿಗನ್ನಡ ಕಾದಂಬರಿಗಳು 'ಮುಗಿಲು ಬಿರಿಯಿತು' (೨೦೦೫) ಮತ್ತು 'ಗೆದ್ದಳು ಕಾವೇರಿ' (೨೦೦೭) ಪ್ರಕಟವಾದವು. ಹಳಗನ್ನಡದ ಪ್ರಭೇದವಾಗಿರುವ ಹವ್ಯಕ ಕನ್ನಡದಲ್ಲಿ ಬಂದಿರುವ ಈ ಕಾದಂಬರಿಗಳು ಕೌಟುಂಬಿಕ ವಸ್ತುವಿಷಯಗಳನ್ನೊಳಗೊಂಡಿದ್ದು ವಿಶಿಷ್ಟವಾದ ಪ್ರಾದೇಶಿಕ ಭಾಷಾ ಬಳಕೆಯಿಂದಾಗಿ (ಕುಂಬಳೆ ಸೀಮೆಯ ಹವ್ಯಕ ಭಾಷೆ) ಮತ್ತು ಕೆಲವು ಸಹಜ ಹಾಸ್ಯ ಸನ್ನಿವೇಶಗಳಿಂದಾಗಿ ಸುಲಲಿತವಾಗಿ ಓದಿಸಿಕೊಂಡು ಹೋಗುತ್ತವೆ. ಸುರಮ್ಯ ಶೈಲಿ ಸವಿತಾ ಮರಕಿಣಿಯವರ ಬರೆವಣಿಗೆಯಲ್ಲಿರುವ ಒಂದು ಉಲ್ಲೇಖನೀಯ

ಅಂಶ. ೨೦೦೮ರಲ್ಲಿ ಪ್ರಕಟವಾದ ಅವರ ಕಥಾಸಂಕಲನ 'ಮಾಂಗಿ ಮಾಸ್ತ್ರಂಗೆ ನಮಸ್ಕಾರ' ಎಂಬ ಹವಿಗನ್ನಡ ಕಥಾಸಂಕಲನದಲ್ಲಿ ಆರು ಸಣ್ಣಕಥೆಗಳಿವೆ. ಹೀಗೆ ಕಾದಂಬರಿ, ಕಥೆ, ಕವನ ಮೂರು ಪ್ರಕಾರಗಳಲ್ಲಿಯೂ ಡಾ. ಸವಿತಾ ಮರಕಿಣಿ ಅವರ ಪರಿಶ್ರಮ ಸಮಪ್ರಮಾಣದಲ್ಲಿದೆ.

ಪ್ರಕಟಣೆಯ ಸಂಖ್ಯೆಯಲ್ಲಿ ಅವರ ಗದ್ಯಕೃತಿಗಳು ಹೆಚ್ಚಾದರೂ ಅವರ ಪ್ರೀತಿಯ ಅಭಿವ್ಯಕ್ತಿ ಮಾಧ್ಯಮ ಕಾವ್ಯವಾಗಿದೆ. ವಿದ್ಯಾರ್ಥಿ ದೆಸೆಯಿಂದಲೂ ಅವರು ಕವಿತೆಗಳನ್ನು ಬರೆಯುತ್ತಿದ್ದರು. ೧೯೯೯ರಲ್ಲಿ ಪ್ರಕಟವಾದ ಅವರ ಮೊಟ್ಟಮೊದಲನೆಯ ಕವನ ಸಂಕಲನ 'ಹೆಸರಿಡದ ಕವನ ಸಂಕಲನ'ದಲ್ಲಿ ಕೆಲವು ಹಳೆಯ ಮತ್ತು ಹೊಸ ಕವನಗಳು ಸೇರ್ಪಡೆಗೊಂಡಿವೆ. ಹಾಡುವ ಮಾದರಿಯ ಮತ್ತು ಮುಕ್ತಛಂದಸ್ಸಿನಲ್ಲಿರುವ ಅವರ ರಚನೆಗಳು ಭಾವಾರ್ದ್ರ ಹೃದಯಿಯ ನೋವು ನಲಿವುಗಳು ಸಹಜ ಅಭಿವ್ಯಕ್ತಿಯಾಗಿ ಗಮನ ಸೆಳೆಯುವಂತಿದ್ದವು.

ಸಮಯ ಸಿಕ್ಕಾಗಲೆಲ್ಲ ಕವನಗಳನ್ನು ಬರೆಯುತ್ತಿದ್ದ ಸವಿತಾ ಅವರ ಹಸ್ತಪ್ರತಿ ರೂಪದಲ್ಲಿರುವ ಕವನಗಳ ಸಂಖ್ಯೆ ಸುಮಾರು ಐದುನೂರಕ್ಕೂ ಮೇಲ್ಪಟ್ಟು ಇವೆ ಎಂದರೆ ಯಾರಿಗಾದರೂ ಆಶ್ಚರ್ಯವಾಗದೆ ಇರದು! ಇಷ್ಟೊಂದು ಸಂಖ್ಯೆಯ ಕವನಗಳು ಅದು ಹೇಗೆ ಪ್ರಕಟವಾಗದೆ ಉಳಿದವು! ಇಷ್ಟೊಂದು ಕವನಗಳನ್ನು ಬರೆದ ಕವಯಿತ್ರಿಯ ಭಾವಪ್ರಪಂಚವಾದರೂ ಎಂತಹುದು! ಈ ರೀತಿಯ ಅಭಿವ್ಯಕ್ತಿ ದಕ್ಕಬೇಕಾದರೆ ಆಕೆಯ ವೈಚಾರಿಕ ಲೋಕ ಎಂತಹದಿತ್ತು! ನನಗೆ ತುಸು ಆಶ್ಚರ್ಯವೇ ಆಯಿತು.

ಈ ಸಂಕಲನದಲ್ಲಿರುವ ಕವಿತೆಗಳ ಸಂಖ್ಯೆಯೇ ನೂರಕ್ಕೆ ಮೇಲ್ಪಟ್ಟು ಇವೆ. ಇವುಗಳನ್ನು ಕನ್ನಡ ನಾಡು, ನುಡಿ, ಕೌಟುಂಬಿಕ, ಸಾಮಾಜಿಕ ವಿಷಯಗಳು, ಭಕ್ತಿ, ಪ್ರಕೃತಿಗೆ ಸಂಬಂಧಿಸಿದವು ಮುಂತಾಗಿ ವಿಭಾಗಿಸಬಹುದು.

ಈ ಸಂಕಲನದ ಕವಿತೆಯಾದ 'ಬಯಕೆ ಬಯಲು' ಭುವಿಬಾನನ್ನು ತಬ್ಬಿಕೊಂಡ ಒಂದು ವಿಶಾಲ ಭಿತ್ತಿಯಲ್ಲಿ ಅಭೀಪ್ಸೆ ಮತ್ತು ವಾಸ್ತವತೆಗಳ ನಡುವಣ ತುಯ್ಯಲಿನಲ್ಲಿ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ಆಸೆ ಅನಂತವಾದುದು; ಅದಕ್ಕೆ ಮಿತಿಯೆಂಬುದಿಲ್ಲ;

**'ಕೊಡು ಈ ಭೂಮಿಯಲಿರುವುದನು ಎಲ್ಲ**
**ಭೂಮಿಯಿಂದ ಆಕಾಶಕ್ಕೆ ಮೆಟ್ಟಿಲನು ಕಟ್ಟು**
**ತುದಿಯಲ್ಲಿ ನನಗೊಂದು ಅರಮನೆಯ ಕೊಟ್ಟು**
**ಸಕಲೈಶ್ವರ್ಯ ಭೋಗಗಳ ಅದರಲ್ಲಿ ತುಂಬು'**

ಇಂತಹ ಕೊನೆಯಿರದ ಆಸೆಗಳ ಬೇಡಿಕೆಯನ್ನು ದೇವರ ಮುಂದಿಟ್ಟ ಕವಯಿತ್ರಿಗೆ ಕೊನೆಗೆ ಅವುಗಳ ನಿಸ್ಸಾರತೆ ಮನವರಿಕೆಯಾಗುತ್ತದೆ.

**'ವಜ್ರ ವೈಢೂರ್ಯಗಳ ರಾಶಿ ಬೇಕಾಗಿಲ್ಲ**
**ನಿನ್ನಿರವೆ ನನಗಿಲ್ಲಿ ಕಾಂತಿ ಶೃಂಗಾರ ಅಲಂಕಾರವಯ್ಯ'**

ಎಂದು ಸರ್ವಾಂತರ್ಯಾಮಿಯಾದ ಭಗವಂತನ ಮಹತ್ವ ಗೊತ್ತಾಗುತ್ತದೆ. ಕೊನೆಗೆ 'ಸೋಹಂ' ಎಂಬ ತತ್ತ್ವದೆಡೆಗೆ ಸಾಗುವ ಪರಿ ಸಂತೋಷ ಕೊಡುತ್ತದೆ:

**'ನಾನು ನೀನೆ ನೀನು ನಾನೆ ಎಂದರಿತುಕೊಂಡೆ**
**ನೆಮ್ಮದಿಯ ಬಾಳನ್ನು ನಾನೆ ಕಲಿತುಕೊಂಡೆ'**

ಈ ಅಧ್ಯಾತ್ಮಭಾವ, ನಾನೇ ನೀನು ನೀನೇ ನಾನು ಎಂಬ ಅವಿನಾಭಾವ ಬಂದಾಗ ಯಾವ ಬೇಡಿಕೆಗಳೂ ಇರುವುದಿಲ್ಲ; ಸ್ವಾರ್ಥವೂ ಇರುವುದಿಲ್ಲ. ಹೀಗೆ ಕವಿತೆ ಒಂದು ಉದಾತ್ತ ಮಟ್ಟಕ್ಕೆ ಏರಿ ನಿಲ್ಲುತ್ತದೆ.

ಈ ಸಂಕಲನದಲ್ಲಿ ಹಲವಾರು ಒಳ್ಳೆಯ ಕವಿತೆಗಳಿವೆ. ಹಾವು ನೋವು, ನಾನು ಬೇಡುವುದಿಲ್ಲ, ಆಸರೆ, ಅಮ್ಮ, ವೇದನೆ, ಮಳೆ ಮೊದಲಾದ ಕವನಗಳು ಒಂದಲ್ಲ ಒಂದು ಕಾರಣಕ್ಕೆ ಮುಖ್ಯವಾಗುತ್ತವೆ. ನೂರಕ್ಕೆ ಮೇಲ್ಪಟ್ಟು ಕವಿತೆಗಳಿರುವ ಈ ಸಂಕಲನದಲ್ಲಿ ಓದಬಹುದಾದ ಹಲವಾರು ಕವನಗಳಿವೆ ಎಂಬುದೇ ಸಮಾಧಾನಕರವಾದ ಅಂಶವಾಗಿದೆ.

ಡಾ. ಸವಿತಾ ಮರಕಿಣಿಯವರು ಕಾವ್ಯರಚನೆಯ ಸೂಕ್ಷ್ಮಗಳ ಕಡೆಗೆ ಗಮನ ಕೊಟ್ಟವರಲ್ಲ. ರಚಿಸಿದ ಮೇಲೆ ಕತ್ತರಿಸಿ–ಸೇರಿಸಿ ಅವನ್ನು ಅಣಿಗೊಳಿಸುವ ಕೆಲಸಕ್ಕೂ ಹೋದವರಲ್ಲ. ಅವರಿಗೆ ಕಾವ್ಯರಚನೆಯೆಂಬುದು ಒಂದು ರೇಚಕಕ್ರಿಯೆ; ಹೊರ ಹಾಕಬೇಕೆಂಬ ತುಡಿತದಲ್ಲಿ ಮನಸ್ಸಿಗೆ ತೋಚಿದ ಭಾವಗಳಿಗೆ ರೂಪ ಕೊಡುತ್ತ ಬಂದರು. ಹಾಗಾಗಿ ಇಲ್ಲಿನ ಕವನಗಳನ್ನು ಕಾವ್ಯ ತಪೋವನದ ಸ್ವಚ್ಛಂದ ಪುಷ್ಪಗಳು ಎಂದು ಕರೆಯಬಹುದು.

ಕವಯಿತ್ರಿ ವಿಧಿವಶರಾಗಿ ಮೂರು ವರ್ಷಗಳ ಬಳಿಕವಾದರೂ ಕವನಗಳು ಸಂಕಲನ ರೂಪದಲ್ಲಿ ಹೊರಬರುತ್ತಿರುವುದು ಸಂತೋಷದ ವಿಚಾರ. ಮುಂದೆ ಬರೆಯುವವರಿಗೆ ಕೆಲವು ಮಾದರಿಗಳು ಇಲ್ಲಿ ಸಿಕ್ಕಬಹುದು. ಮಹಿಳಾ ಸಾಹಿತ್ಯ ಕುರಿತು ಅಧ್ಯಯನ ಮಾಡುವವರಿಗೆ ವಸ್ತು–ವಿಷಯಗಳು ಒದಗಿ ಬರಬಹುದು.

ಬಿಡುವಿಲ್ಲದ ವೈದ್ಯಕೀಯ ವೃತ್ತಿಯ ನಡುವೆಯೂ ತನ್ನ ಭಾವಕೋಶದ ವಿರೇಚನಕ್ಕೆ ಅವಕಾಶ ಮಾಡಿಕೊಂಡ ಕವಯಿತ್ರಿಯ ಹೆಚ್ಚುಗಾರಿಕೆಯ ಬಗ್ಗೆ ಹೆಮ್ಮೆ ಪಟ್ಟುಕೊಳ್ಳಬಹುದು. ಆ ಮೂಲಕ ಕೆಲವರಿಗಾದರೂ ಪ್ರಭಾವ–ಪ್ರೇರಣೆ ಒದಗಿ ಬರಬಹುದು.

ಈ ಕೃತಿಯನ್ನು ಆಸ್ಥೆ ವಹಿಸಿ ಪ್ರಕಟಿಸಲು ಮುಂದಾದ ಡಾ. ಎಂ.ಬಿ. ಮರಕ್ಕಿಣಿಯವರನ್ನು ನಾನು ಅಭಿನಂದಿಸುತ್ತೇನೆ. ಕವಯಿತ್ರಿಯ ಬಗ್ಗೆ ಮೆಚ್ಚುಗೆಯೂ ಸಂತೋಷವೂ ಉಂಟಾಗುವಂತೆ ಮಾಡಿದ್ದಕ್ಕಾಗಿ ಕೃತಜ್ಞತೆ ಸಲ್ಲಿಸುತ್ತೇನೆ.

**ಮಂಗಳೂರು** **–ಡಾ. ವಸಂತಕುಮಾರ ಪೆರ್ಲ**

# ಮುನ್ನುಡಿ – ೪

ಡಾ। ಸಬಿತಾ ಮರಕಿಣಿಯವರ ಈ ಕವನ ಸಂಕಲನಕ್ಕೆ ಮುನ್ನುಡಿಯ ನಾಲ್ಕು ಮಾತುಗಳನ್ನು ಬರೆಯಲು ನನಗೆ ತುಂಬಾ ಸಂತೋಷವಾಗುತ್ತಿದೆ. ಸಬಿತಾ ಅವರ ವೈಯಕ್ತಿಕ ಪರಿಚಯ ನನಗಿಲ್ಲವಾದರೂ, ಜನಪ್ರಿಯ ವೈದ್ಯೆಯಾಗಿದ್ದ ಅವರು ದೇಶ–ಪ್ರದೇಶಗಳಲ್ಲಿ ನಡೆಸುತ್ತಿದ್ದ ಸಮಾಜ ಸೇವಾ ಕಾರ್ಯಗಳ ಬಗ್ಗೆ ಸಾಕಷ್ಟು ಕೇಳಿ, ಬಲ್ಲೆ. ಅವರ ಪತಿ ಶ್ರೀ ಎಂ.ಬಿ. ಮರಕಿಣಿಯವರು ಕಳೆದ ಐವತ್ತು ಹಾಗೂ ಅರವತ್ತನೇ ದಶಕಗಳಲ್ಲಿ ಪುತ್ತೂರು ಹಾಗೂ ಅದರ ಆಸುಪಾಸುಗಳ ಪ್ರದೇಶಗಳಲ್ಲಿ ನಡೆಸುತ್ತಿದ್ದ ಸಾಹಿತ್ಯ ಹಾಗೂ ಸಾಮಾಜಿಕ ಚಟುವಟಿಕೆಗಳ ನೆನಪು ಈಗಲೂ ನನ್ನಲ್ಲಿ ಹಸಿರಾಗಿಯೇ ಉಳಿದಿದೆ. ಡಾ॥ ಸಬಿತಾ ಅವರು ತಮ್ಮ ಬಿಡುವಿಲ್ಲದ ಚಟುವಟಿಕೆಗಳ ನಡುವೆಯೂ ತಮ್ಮ ಅಂತರಂಗದ ತಳಮಳಗಳ ಖುಷಿಯ ವಿಷಾದದ ಆಸೆ ನಿರಾಸೆಗಳ ಅಭಿವ್ಯಕ್ತಿಯಾಗಿ ಕತೆ ಕಾದಂಬರಿ ನಾಟಕ, ಕವಿತೆ .ಅನುವಾದ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸುತ್ತಲೇ ಇದ್ದರು. ಅದರಲ್ಲೂ ಹವ್ಯಕ ಭಾಷೆಗೆ ಅವರು ನೀಡಿದ ಕೊಡುಗೆ ಗಮನಾರ್ಹವಾದುದು. ಕನ್ನಡ ಹಾಗೂ ಹವಿಗನ್ನಡ ಭಾಷೆಯ ಐದು ಕೃತಿಗಳು ಈಗಾಗಲೇ ಪ್ರಕಟವಾಗಿದ್ದು, ಪ್ರಕಟವಾಗದೇ ಹಸ್ತಪ್ರತಿಯಲ್ಲೇ ಉಳಿದಿರುವ ಅನೇಕ ಕೃತಿಗಳು ಪ್ರಕಟಣೆಯ ಶುಭ ಮುಹೂರ್ತಕ್ಕಾಗಿ ಕಾದು ಕುಳಿತಿವೆ. ಈ ನಿಟ್ಟಿನಲ್ಲಿ ಸಬಿತಾ ಅವರ ಪತಿ ಎಂ.ಬಿ. ಮರಕಿಣಿಯವರು ಅವುಗಳ ಪ್ರಕಟಣೆಗೆ ಮುಂದಾಗಿದ್ದು ಪ್ರಸ್ತುತ ಕವನ ಸಂಕಲನವು ಅವುಗಳಲ್ಲಿ ಒಂದಾಗಿದೆ.

ಪ್ರಕಟವಾಗದೇ ಉಳಿದಿದ್ದ ನೂರಾರು ಕವಿತೆಗಳ ಪೈಕಿ ಸಬಿತಾ ಅವರ ಎರಡನೆ ಕವನ ಸಂಕಲನವಾದ ಈ ಕೃತಿಯಲ್ಲಿ ಕೆಲವು ಕವಿತೆಗಳನ್ನು ಆಯ್ದುಕೊಳ್ಳಲಾಗಿದೆ. ಇಲ್ಲಿನ ಕವಿತೆಗಳನ್ನು ಓದುತ್ತಾ ಹೋದಂತೆ ಸಬಿತಾ ಅವರು ತಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಂದ ದಕ್ಕಿದ ಅನುಭವಗಳಿಗೆ ಸೂಕ್ತರೂಪಕಗಳನ್ನು ಸುತ್ತಲಿನ ಪ್ರಕೃತಿಯಲ್ಲಿ ಹುಡುಕುತ್ತಿದ್ದಾರೆ ಅಂತ ಅನಿಸಿತು.

ಇಲ್ಲಿ ಸಿಟ್ಟು, ವಿಷಾಧ, ಗಾಢನೋವು, ತನ್ನ ಬದುಕಿನ ಸ್ವರೂಪದ ಬಗ್ಗೆ ಕಾಳಜಿ, ಪ್ರಕೃತಿ ಪ್ರೇಮ ಎಲ್ಲವೂ ಕವಿತೆಯ ರೂಪ ಪಡೆಯಲು ಹವಣಿಸುತ್ತಿವೆ. ಅವರಿಗೆ ಕಾವ್ಯ ಶಿಲ್ಪದ ಕೌಶಲ್ಯಕ್ಕಿಂತ ಅಂದರೆ ಕವಿತಾ ರಚನೆಯ ಕುಸುರಿ ಕೆಲಸಕ್ಕಿಂತ ಅನುಭವಗಳ ಅನಿಸಿಕೆಗಳ ನೇರ ನಿರೂಪಣೆಯೇ ಮುಖ್ಯ ಅಂತ ಅನಿಸಿರಬೇಕು. ಅವರ 'ಕವಿತೆ ಭಾವನೆಗಳು' ಎಂಬ ಕವಿತೆಯಲ್ಲಿ ಅವರು ಹೀಗೆ ಹೇಳುತ್ತಾರೆ.

**ಇವು ಕಾವ್ಯಗಳಲ್ಲ ಕವಿತೆಗಳು**
**ಕಾವೇರಿದ ಮನದ ತುಣುಕುಗಳು**
**ಉಕ್ಕೇರಿದಲೆಗಳಲಿ ತೇಲಿದ ಚಿಪ್ಪುಗಳು**
**ಬೊಗಸೆಯಲಿ ಹಿಡಿದಷ್ಟೆ ನೀರು**
**ಹೊರಹೊಮ್ಮಿ ಬರೆದಷ್ಟೆ ಭಾವ ಭಂಡಾರಗಳು**

ಬದುಕಿನ ಸುಧೀರ್ಘಯಾತ್ರೆಯಲ್ಲಿ ತಾವು ಪಡೆದ ನೋವಿನ ತಲ್ಲಣಗಳ ಒಂದು ಬೊಗಸೆಯಷ್ಟೆ ಈ ಕವಿತೆಗಳು ಎನ್ನುವ ಮೂಲಕ ತಮ್ಮ ಅನುಭವ ಸಮೃದ್ಧಿ ಹಾಗೂ ಅವನ್ನು ಪೂರ್ತಿಯಾಗಿ ಕವಿತೆಗಳಲ್ಲಿ ಹಿಡಿಯಲಾಗದ ಅಸಹಾಯಕತೆಯನ್ನು ಸಬಿತಾ ಅವರು ಈ ಸಾಲುಗಳ ಮೂಲಕ ಸೂಚಿಸುತ್ತಿದ್ದಾರೆ.

ಸಂಸಾರದ, ಸಾಮಾಜಿಕ ಕಟ್ಟಳೆಗಳ ಬಂಧನ ಹಾಗೂ ಅವುಗಳಿಂದ ಮುಕ್ತಿ ಪಡೆಯುವ ಹೆಣ್ಣಿನ ಹಂಬಲ ಇಲ್ಲಿನ ಅನೇಕ ಕವಿತೆಗಳ ವಸ್ತುಗಳಾಗಿವೆ. ಹಕ್ಕಿ, ಮರ ಮೊದಲಾದ ರೂಪಕಗಳ ಮೂಲಕ ಈ ವಸ್ತುಗಳು ಇಲ್ಲಿ ಕವಿತೆಯ ರೂಪ ಪಡೆದಿವೆ. 'ಬಂಧನದ ಹಕ್ಕಿ', 'ನಾನೊಂದು ಹೆಣ್ಣು', 'ಎಳೆಮರ', 'ನಾನೊಂದು ಮರ', 'ರೆಕ್ಕೆ ಮುರಿದ ಹಕ್ಕಿ', ಮೊದಲಾದ ಕವಿತೆಗಳು ಈ ಬಗೆಯವುಗಳು. 'ಬಂಧನ ಹಕ್ಕಿ', ಕವಿತೆಯ ಈ ಸಾಲುಗಳನ್ನು ಗಮನಿಸಿ!,

**'ಬಂಧನದಹಕ್ಕಿಯೇ ಚಡಪಡಿಸಬೇಡ**
**ಬಂದಿರುವೆ ನಿಲ್ಲಿ, ನನ್ನ ಬಿಡುಗಡೆಗೆಂದು**
**ದಿನವೆಷ್ಟೊ ಇರುಳೆಷ್ಟೊ ಕಾರ್ಮುಗಿಲ ಬಾಳೆಷ್ಟೆ**
**ಬೆಳಕು ಕಾಣಲು ಎಂದು ಚಡಪಡಿಸಿದೆ ನೀನು**
**ಕಳೆದು ಹೋಗಲಿದೆ ನಿನ್ನ ಬಂಧನದ ಬಾಳಿಂದು**

ಹಾಯಾಗಿ ಹಾರಾಡು ಗರಿಯ ಬಿಚ್ಚಿ (ಬಂಧನದ ಹಕ್ಕಿ)

ರೆಕ್ಕೆ ಮುರಿದ ಹಕ್ಕಿಯೊಂದು
ಹಾರಾಡಲಿಲ್ಲ.
ಯಾರು ಎಷ್ಟು ಹೊಡೆದರೋ
ಎಷ್ಟು ಬಡಿದರೋ
ದೂರು ಹೇಳದಾಯಿತು
ತನ್ನ ನೋವ ತಾನೆ ಉಂಡು
ಮರೆತೆಹೋಯ್ತು ಜಗದಲಿ (ರೆಕ್ಕೆ ಮುರಿದ ಹಕ್ಕಿ)

ನಾನೊಂದು ಮರ
ನನಗಿದೆ ಧೈರ್ಯ ಸ್ಥೈರ್ಯ
ಒಂಟಿಯಾಗಿದ್ದೇನೆ
ಬಯಲಲ್ಲಿ ನಾನು
ನಾನೇಕೆ ಸಾಯಲಿ
ನೋವನಪ್ಪಲಿ
ಕಾದಾಡಬೇಕು ಕೊನೆಯುಸಿರತನಕ
ಹಾಗೆ ನಿಂತಿದ್ದೇನೆ ಮರವಾಗಿ ಇಲ್ಲಿ (ನಾನೊಂದು ಮರ)

ಒಲಿದ ಕೊಂಬೆಯ ಕಂಡು ಬಾಯ್ಬಿಟ್ಟರೆಲ್ಲಾ
ಕೊಡಲಿ ಗಾಯದಿ ನನ್ನ ಕೊಲ್ಲುತಿಹರೆಲ್ಲಾ
ಬರಿಬೇನೆ ನನ್ನುಸಿರು ಕಡಿದುಕೊಂಡೊಯ್ಯುವರು
ಕೊರಡಾಗಿ ಮಾಡುವರು, ಬೆಂಕಿಗೊಡ್ಡುವರು (ಎಳೆಮರ)

ಬಂಧನದ ಸ್ಥಿತಿ ತಮ್ಮವರಿಂದಲೇ ಸಿಗುವ ತೊಂದರೆಗಳು ಹಾಗೂ ಇದನ್ನೆಲ್ಲ ಮೀರಿ ನಿಂತು ಸ್ವಾತಂತ್ರ್ಯವನ್ನು ಪಡೆಯುವ ಆಕಾಂಕ್ಷೆ ಮತ್ತು ಹೀಗೆ ಬಂಧನಕ್ಕೊಳಗಾದ

ಎಲ್ಲರನ್ನೂ ಬಂಧಮುಕ್ತರನ್ನಾಗಿಸುವ ದೃಢ ನಿರ್ಧಾರ ಈ ಸಾಲುಗಳಲ್ಲಿ ಪರಿಣಾಮಕಾರಿಯಾಗಿ ವ್ಯಕ್ತವಾಗುತ್ತದೆ.

ಹೀಗೆ ಬಂಧನದ ಕತ್ತಲಿನಿಂದ ಬಿಡುಗಡೆಯ ಬೆಳಕಿನ ಕಡೆಗೆ ಚಲಿಸುವ ಹಂಬಲದಲ್ಲಿ ಬದುಕುವ ಛಲ ಹಾಗೂ ಕಟ್ಟಿಕೊಳ್ಳುವ ಕನಸುಗಳು ಹೆಣ್ಣಿನ ಬಾಳಿಗೆ ಒಂದು ಆಧಾರವನ್ನು ತಂದುಕೊಡುತ್ತದೆ ಎಂಬುದನ್ನು ಕವಯಿತ್ರಿ ಇಲ್ಲಿನ ಇನ್ನೂ ಕೆಲವು ಕವಿತೆಗಳಲ್ಲಿ ನಿರೂಪಿಸಲು ಯತ್ನಿಸಿದ್ದಾರೆ. 'ನಾನೊಂದು ಹೆಣ್ಣು', ಹೊಸಕನಸು ಬೇಕು, ಕತ್ತಲು–ಬೆಳಕು, ಹೊಂಗನಸು, ಒಂದಾಸೆ ಮೊದಲಾದವುಗಳು ಈ ಬಗೆಯ ಕವಿತೆಗಳು 'ನಾನೊಂದು ಹೆಣ್ಣು' ಕವಿತೆಯಲ್ಲಿ ಬಾಲ್ಯದಲ್ಲೆ ವಿಧವೆಯಾದ ಹೆಣ್ಣಿನ ಭಗ್ನಕನಸುಗಳ, ಬದುಕುವ ಛಲದ ಸೂಕ್ಷ್ಮ ಚಿತ್ರಣವಿದೆ.

**'ನಾನು ನಿತ್ಯ ವಧುವೆ**
**ಬಾಲ್ಯದಲ್ಲಿಯೆ ತಾಳಿ ಕಟ್ಟಿ**
**ಮಾಯವಾದ ಮಸಣದಲ್ಲಿ**
**ವಿಧವೆಯಾದೆ, ಹುಚ್ಚಿಯಾದೆ**
**ಕೆಚ್ಚಿದೆಯಲಿ ಬದುಕುತಿರುವೆ**
**ಕಳೆದ ಬದುಕು ನೆನೆಯುತಿರುವೆ**
**ವೇಷ ಕಳೆದು, ಭೀತಳಾಗ ಕ್ಷಣಿಕ ಬಾಳನೋವಿನಲ್ಲಿ . . . .**
**(ನಾನೊಂದು ಹೆಣ್ಣು)**

ಇಂಥ ದುರ್ಬರ ಸನ್ನಿವೇಶವನ್ನೂ ಸಹ್ಯವಾಗಿಸುವುದು ನಾವು ಕಟ್ಟಿ ಕೊಳ್ಳುವ ಕನಸುಗಳೇ; ಕನಸುಗಳ ಜಗತ್ತಿನಲ್ಲೇ ನೆಮ್ಮದಿಯನ್ನು ಕಂಡುಕೊಳ್ಳಬಹುದು ಎಂಬುದನ್ನು ಈ ಸಾಲುಗಳು ಸೂಕ್ಷ್ಮವ್ಯಂಗ್ಯದೊಂದಿಗೆ ಸೂಚಿಸುತ್ತದೆ.

**'ಚಿಂತಿಲ್ಲ, ಅರೆಗಳಿಗೆ ಸುಖವಾಯ್ತು ನನಗೆ**
**ಬಯಸಿದುದು ಬಂತಲ್ಲ, ಕನಸಾದರೇನು!**
**ನೆನಸಿಗೂ ಕನಸಿಗೂ ವ್ಯತ್ಯಾಸವೇನು?**

**ತಿನಿಸಿಗೂ ಬಾಯಿಗೂ ಇರುವಷ್ಟು ಮಾತ್ರ - (ಹೊಂಗನಸು)**

**ಕಾದಾಡಿ ಹೋರಾಡಿ ಗೆದ್ದಮನಕೆ**
**ಆಸರೆಯು ನೀನೆನಗೆ, ಬೇಸರವು ಏಕೆ?**
**ನಿದ್ದೆಯಲಿ ನೀನಿರುವೆ, ನಿನ್ನ ನಾ ತಬ್ಬಿರುವೆ**
**ದಿನದಿನವೂ ಬಳಿ ಬಂದು ಎಷ್ಟೊಂದು ರಮಿಸುವೆ! (ಕನಸುಗಳು)**

ಕನಸುಗಳಿಲ್ಲದ ಬಾಳು ಬಾಳಲ್ಲ; ಕನಸುಗಳನ್ನು ಕಾಣದ ಮನುಷ್ಯನಿಲ್ಲ. ಅಲ್ಲಿ ಕವಿತೆಯೂ ಇಲ್ಲ. ಕನಸುಗಳು ಭಗ್ನವಾಗುತ್ತಾ ಹೋದಂತೆ ಹೊಸಕನಸುಗಳನ್ನು ಕಾಣಲು ಹಂಬಲಿಸುವುದರಲ್ಲೇ ಮನುಷ್ಯ ಜೀವನದ ಸಾರ್ಥಕತೆಯು ಅಡಗಿದೆ. ಇಲ್ಲವಾದರೆ ಮನುಷ್ಯ ಸಿನಕನಾಗಿಬಿಡಬಲ್ಲ. ಬಾಳಿನ ರುಚಿಯನ್ನೇ ಕಳೆದುಕೊಳ್ಳಬಲ್ಲ. ಇದರ ಅರಿವು ಕವಯತ್ರಿಗೆ ಇರುವುದರಿಂದಲೇ ಅವರು ಹಳೆಯ ಕನಸುಗಳನ್ನು ಕಳೆದುಕೊಂಡ ತನ್ನ ಬದುಕಿಗೆ ಹೊಸ ಕನಸುಗಳನ್ನು ಆಹ್ವಾನಿಸುತ್ತಾರೆ.

**ಹೊಸ ಕನಸುಗಳೆ ಬನ್ನಿ**
**ಓಡೋಡಿ ಬನ್ನಿ**
**ನನ್ನ ತನುಮನವ**
**ಬಿಗಿದಪ್ಪಿಕೊಳ್ಳಿ**
**ಹಳೆಯ ಕನಸುಗಳೆಲ್ಲ**
**ಹಳಸಿ ಹೋದವು ಎಂದೋ**
**ಚಿಗುರಿಕೊಂಡರೂ ಹೂವ**
**ಬಿಡಲಿಲ್ಲ ಮುಂದು (ಹೊಸ ಕನಸು ಬೇಕು)**

ಎಷ್ಟೇ ಕಷ್ಟಗಳು ಬಂದರೂ ಎದೆಗೆಡದೆ ಕವಯತ್ರಿ ತನ್ನ ಬದುಕಿನಲ್ಲಿ ಸಂತೃಪ್ತಿಯ ನೆಮ್ಮದಿಯ ತಾಣವೊಂದನ್ನು ಕಂಡುಕೊಳ್ಳಲು, ಕಟ್ಟಿಕೊಳ್ಳಲು ನಡೆಸಿದ ಪ್ರಯತ್ನವನ್ನು 'ಸಂತೃಪ್ತ', 'ನಿತ್ಯವೂ ಬಂದು ಹೋಗುಸಂತ', 'ಸಪ್ತಪದಿ', 'ನನ್ನ ಮುದ್ದಿನ ಕಂದ', 'ವಸಂತಾಗಮನ', ಮೊದಲಾದ ಕವಿತೆಗಳಲ್ಲಿ ಕಾಣಬಹುದು.

ಕೊನೆಗೂ ಕವಯಿತ್ರಿಗಿರುವ ಆಸೆಯೊಂದೆ; ಅದು ಸಹೃದಯರ ಮನದಲ್ಲಿ ತಾನೊಂದು ಕವಿಯಾಗಿ ಉಳಿಯಬೇಕೆಂದು–

**'ನಿನ್ನೆದೆಯಲ್ಲಿ ನನ್ನನ್ನೊಂದು**
**ಕವನವಾಗಿಸಿಕೋ**
**ಮತ್ತೆಲ್ಲವನು ಮರೆತುಬಿಡು**
**ನೆನಪಾದಾಗ ಒಂದೊಮ್ಮೆ ಓದಿಕೋ**
**ನನ್ನ ಪ್ರೀತಿಗೆ ಇಷ್ಟೆ ಸಾಕು**
**ನನ್ನನ್ನೇ ಮರೆತು ಬಿಡು. (ಕವನವಾಗಿಸು ನನ್ನ)**

ಹೀಗೆ ಸಬಿತಾ ಅವರು ತನ್ನ ಅಂತರಂಗದ ತುಮುಲಗಳನ್ನು ಬೇರೆ ಬೇರೆ ರೀತಿಗಳಲ್ಲಿ ನಿರೂಪಿಸುತ್ತಲೇ, ಬಾಳಿನಲ್ಲಿ ಕೊನೆಗೂ ಉಳಿಯುವುದೇನು ಹಾಗೂ ತನ್ನ ಅಪೇಕ್ಷೆಯೇನು ಎಂಬುದನ್ನು ಮಾರ್ಮಿಕವಾಗಿ ಈ ಕವಿತೆಗಳ ಮೂಲಕ ಸೂಚಿಸಿದ್ದಾರೆ.

ಇಂದು ಸಬಿತಾ ಅವರು ಭೌತಿಕವಾಗಿ ಇಲ್ಲ. ಆದರೆ ಅವರ ಅಪೇಕ್ಷೆಯಂತೆ ಕವಿತೆಗಳ ರೂಪದಲ್ಲಿ ಅವರು ಸಹೃದಯರ ಮನದಲ್ಲಿ ಉಳಿದುಕೊಂಡಿದ್ದಾರೆ. ಸಫಲ ಬದುಕು ಅಂದರೆ ಅದೇ ಅಲ್ಲವೇ?

ಅವರ ಎಲ್ಲ ಅಪ್ರಕಟಿತ ಕೃತಿಗಳು ಪ್ರಕಟವಾಗಿ, ಸಹೃದಯರ ಮನದಲ್ಲಿ ನೆಲೆ ನಿಲ್ಲಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

**– ಸುಬ್ರಾಯ ಚೊಕ್ಕಾಡಿ**

# ಮುನ್ನುಡಿ – ೫

ಡಾ. ಸವಿತಾ ಮರಕಿಣಿಯವರ ಸಾಹಿತ್ಯ ಪ್ರತಿಭೆಯನ್ನು ಪ್ರಾಯಶಃ ನಾಡು ತುಂಬ ತಡವಾಗಿ ಗುರುತಿಸಿದೆ; ಅಥವಾ ಗುರುತಿಸುವುದಕ್ಕೆ ಈಗಷ್ಟೆ ಪ್ರಯತ್ನಿಸುತ್ತಿದೆ. ಅಬ್ಬರದ ಪ್ರಚಾರದ ನಡುವೆ ಪ್ರಸಿದ್ಧಿಯ ಸದ್ದು ಗದ್ದಲಗಳ ನಡುವೆ–ಮೌನವಾಗಿ ಸ್ವಧರ್ಮಾಚರಣೆಯಲ್ಲಿ ನಿರತವಾಗಿರುವ ನಿಜಾರ್ಥದ ಸಾಧಕರು ನೇಪಥ್ಯದಲ್ಲೇ ಅಗೋಚರರಾಗಿ ಉಳಿಯುವದು ಅಪರೂಪವಲ್ಲವಾದರೂ ಇಂತಹ ಒಂದು ಸ್ಥಿತಿ ಬದುಕಿನ ಯಾವ ಕ್ಷೇತ್ರದಲ್ಲೇ ಸಂಭವಿಸಿದರೂ ಅದು ಆರೋಗ್ಯಕರ ಅಲ್ಲ ಎನ್ನುವುದಕ್ಕೆ ಬಹುಜನರ ದೃಷ್ಟಿಯಲ್ಲಿ ಅನಾಮಧೇಯರಾಗಿಯೇ ಉಳಿದ ಡಾ.ಸವಿತಾ ಅವರ ಅದ್ಭುತವಾದ ಸಾಧನೆಗಳೇ ಸಾಕ್ಷಿ ನುಡಿಯುತ್ತವೆ.

ವೃತ್ತಿಯಿಂದ ವೈದ್ಯೆಯಾಗಿದ್ದು ರೋಗಿಗಳ ದುಃಖಿತರ ಸೇವೆಯಲ್ಲಿ ಕೃತಕೃತ್ಯತೆಯನ್ನು ಕಾಣುತಿದ್ದ ಸವಿತಾ ಅವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕಾಣ್ಕೆಗಳ ಮೇಲ್ನೋಟದ ಅವಲೋಕನವೇ ಅವರ ವ್ಯಕ್ತಿತ್ವ ನಿರ್ಮಾಣದಲ್ಲಿ ಸಾಹಿತಿಯಲ್ಲಿ ಅಂತರ್ಗತವಾಗಿದ್ದ ವೈದ್ಯೆಯನ್ನೂ ವೈದ್ಯೆಯಲ್ಲಿ ಅಂತರ್ಗತವಾಗಿದ್ದ ಸಾಹಿತಿಯನ್ನೂ ಅನಾವರಣಗೊಳಿಸುವ ರೀತಿ ಮತ್ತು ಈ ಎರಡನ್ನೂ ಅವರು ಸಮನ್ವಯಿಸುವಲ್ಲಿ ವ್ಯಕ್ತವಾಗುವ ಪ್ರೀತಿ–ನಮ್ಮನ್ನು ಬೆರಗಾಗಿಸುತ್ತದೆ. ಗದ್ಯ ಪದ್ಯಗಳೆರಡರಲ್ಲೂ ಅವರು ನಡೆಸಿರುವ ಅತ್ಯಂತ ಫಲವತ್ತಾದ ಕೃಷಿ ನಮ್ಮ ಹೃನ್ಮನಗಳನ್ನು ತಣಿಸುತ್ತದೆ.

ಅವರ ಜೀವಿತ ಕಾಲದಲ್ಲಿ ಬೆಳಕಿಗೆ ಬಂದ 'ಹೆಸರಿಡದ ಕವನ ಸಂಕಲನ'ವನ್ನು ಅನೇಕರು ಗಮನಿಸಿಲ್ಲ; ಗಮನಿಸಿದವರಾದರೂ ಅದರ ಹಿಂದೆ ಮುಂದೆ ಕಡತದಲ್ಲೇ ಉಳಿದು ಹೋದ ಕವನಗಳ ಒಂದು ದೊಡ್ಡ ಕೊಪ್ಪರಿಗೆಯೇ ಇದೆ ಎನ್ನುವುದನ್ನು ತಿಳಿದಿರಲಾರರು ಮಾತ್ರವಲ್ಲ ಊಹಿಸಿರಲಾರರು. ತೀರ ಇತ್ತೀಚೆಗೆ ಅವರ ಕವನಗಳ ರಾಶಿಯಿಂದ ಪ್ರತ್ಯೇಕಿಸಲ್ಪಟ್ಟ ಹಲವಾರು ಕವನಗಳನ್ನು ಓದುವ, ಆಸ್ವಾದಿಸುವ ಸದವಕಾಶ ಒದಗಿಬಂದಾಗ ನನ್ನಲ್ಲಿ ಹುಟ್ಟಿದ ಭಾವದಿಂದ ನನ್ನ ಈ ಅನಿಸಿಕೆ ಮತ್ತೂ ದೃಢವಾಯಿತು.

ಡಾ.ಸವಿತಾ ಅವರು ಪರಿಶುದ್ಧವಾದ ಕವಿಹೃದಯವನ್ನು ತನ್ನದಾಗಿಸಿಕೊಂಡ ಒಬ್ಬ ಸುಸಂಸ್ಕೃತ ಸಮರ್ಥ ಕವಯತ್ರಿ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಒಳ್ಳೆಯ ಕವನಗಳಲ್ಲಿ ಸಹೃದಯರು ಅಪೇಕ್ಷಿಸಿರುವ ಸದ್ಗುಣಗಳೆಲ್ಲ ಅವರ ಕವಿತೆಗಳಲ್ಲಿ ಧಾರಾಳವಾಗಿ ಕಾಣಿಸಿಕೊಳ್ಳುತ್ತವೆ.

ಸರಳವಾದ ಭಾಷೆ-ವಿರಳವಾದ ಭಾವ ಇದು ಅವರ ಕವನಗಳ ವೈಶಿಷ್ಟ್ಯ. ಜೀವರು, ದೇವರು ಮತ್ತು ಜಗತ್ತು ಈ ಎಲ್ಲವನ್ನೂ ಕಾವ್ಯದ ವಿಷಯವಾಗಿಸಿಕೊಳ್ಳಬಲ್ಲ ಕಲೆ ಅವರಿಗೆ ಸಿದ್ಧಿಸಿದೆ. ಆದ್ದರಿಂದಲೇ ಅವರ ಸಂಕಲನದಲ್ಲಿ ವಿಷಯಗಳ ವೈವಿಧ್ಯ ವಿಜೃಂಭಿಸಿದೆ.

ಐಂದ್ರಿಯ ಸೌಂದರ್ಯ, ಭಾವನಾತ್ಮಕ ಸೌಂದರ್ಯ, ಬೌದ್ಧಿಕ ಸೌಂದರ್ಯ ಮತ್ತು ಅಂತಿಮವಾಗಿ ದಕ್ಕುವ ಆತ್ಮ ಸೌಂದರ್ಯ (ಆತ್ಮಾನಂದ) ಈ ಎಲ್ಲವೂ ಅವರ ಕವಿತೆಗಳಲ್ಲಿ ಮೇಳೈಸುತ್ತವೆ. ವಾಚ್ಯಾರ್ಥ ಸೂಚ್ಯಾರ್ಥಗಳು ಹೃದಯಂಗಮವಾಗಿ ಸಂಗಮಿಸುತ್ತವೆ. ಇಹದಿಂದ ಪರಕ್ಕೆ ಲೌಕಿಕದಿಂದ ಪಾರಲೌಕಿಕಕ್ಕೆ ಅವರ ನೆಗೆಯುವ ಪರಿ ತುಂಬ ರೋಚಕವಾಗಿದೆ.

ನನ್ನ ಅವಗಾಹನೆಗೆ ಬಂದ ಕವನಗಳಲ್ಲಿ ಹಲವು ಬಹಳಷ್ಟು ಒಳ್ಳೆಯ ಕವನಗಳು; ಕೆಲವು ಸಾಮಾನ್ಯ ಕವನಗಳು-ಆದರೂ Above Average ಗುಣಮಟ್ಟದವುಗಳು. ಬೆರಳೆಣಿಕೆಯ ಕೆಲವನ್ನು ಬಿಟ್ಟರೆ ಕಳಪೆ ಎನ್ನಬಹುದಾದ ಕವನಗಳೇ ಇಲ್ಲ ಎಂದರೆ ಏನೇನೂ ಉತ್ಪ್ರೇಕ್ಷೆ ಇಲ್ಲ. ಹಾಗಾಗಿಯೇ ಕವನಗಳನ್ನು ಆಯುವುದರ ಬದಲು ಎಲ್ಲವನ್ನೂ ಒಂದಾಗಿ ನೇಯುವುದೇ ಸೂಕ್ತ ಎನ್ನುವ ಅಭಿಪ್ರಾಯವನ್ನು ನಾನು ಹೊಂದುವಂತಾಯಿತು.

**ಓ ಜಲಗಾರ**
**ಗುಡಿಸು ಬಾ ನನ್ನೆದೆಯ**
**ನೀರನೆರೆದು ಬಾರಿ ಬಾರಿಗೂ ಗುಡಿಸು**
**ಹೊಲಸು ತುಂಬಿದೆ**
**ಹಲವು ದಿನಗಳದ್ದು**
**ಹಳಸಿ ನಾರುತಿದೆ ಹಲವು ಬಗೆಯಲ್ಲಿ**
**ಹುಳುಕು ತುಂಬಿದೆ**
**ಮನದ ಮೂಲೆ ಮೂಲೆಯಲ್ಲಿ**

ನನ್ನ ಬದುಕಿದು ನನ್ನದಲ್ಲವೋ ಶಿವನೆ
ನಿನ್ನಾಟವೇ ಎಲ್ಲಾ ನನ್ನದೇನಿಲ್ಲ
ಅವಸರಿಸಿ ತಿಂದದ್ದು
ಪಚನವಾಗದು ನೋಡು
ನೀನು ಬರೆಯುವ ಮುನ್ನ
ಚಿಂತಿಸು ಹಣ್ಣಾಗು

ಹೆಜ್ಜೇನನು ಗೂಡುಗಳು ಗುಬ್ಬಚ್ಚಿ ತಾಣಗಳು
ಇನ್ನೆಷ್ಟೊ ನೆನಪುಗಳು ಕುಕ್ಕುತಿದೆ ಮನವ
ಬಂದು ಸೇರುವೆನಲ್ಲಾ ಎಂಬ ಕಾತರವು
ತಡೆಯಲಾಗದು ವೇಗ ಬಾ ನನ್ನೂರೆ ಬೇಗ

ಇಲ್ಲಿ ಕೂತು ನಾವು
ಯಾವ ಕವಿತೆಯನ್ನು ಬರೆಯಲು
ಹೆಂಗಸರ ಕೊರಳಲ್ಲಿ
ಗುನುಗುನಿಸುವ ಜೋಗಳವಿಲ್ಲ
ರಾಗಿ ಬೀಸುವ ಕಲ್ಲಿನಿಂದ
ಹಿಟ್ಟು ಉದುರುತ್ತಿಲ್ಲ
ನವವಧುವಿನ ಕಣ್ಣಿನಲಿ
ನಾಚಿಕೆಯ ನೆರಳಿಲ್ಲಿ
ಲಜ್ಜೆಯ ಗುರುತಿಲ್ಲಿ
ನೀರಿನ ಝರಿಗಳ ಗುರುತಿಲ್ಲಿ
ಹಕ್ಕಿ ಹಾಡಿಲ್ಲಿ.

ಎಲ್ಲರಿಂದಲೂ ಬೀಳ್ಕೊಂಡು ಬರುತ್ತೇನೆ
ಆಗ ನಿಶ್ಚಿಂತೆ–ಹಾಗೇ ಕೂತಿರಿ ಇಲ್ಲಿ

ಬೇಕಾದರೆ ಅಗಳಿ ನೀವೇ ಹಾಕಿಕೊಳ್ಳಿ
ಬರೇ ಗಳಿಗೆಯೊಳಗೆ ಬಾರದಿದ್ದರೆ ನೀವೆ ಬನ್ನಿರಿ ಒಳಗೆ
ನೇರ ಬನ್ನಿರಿ ನನ್ನ ಬಳಿಗೆ ಸರಿಯೇ
ಬರುತ್ತೇನೆ ಗಳಿಗೆಯಲಿ ಕಾದು ಕುಳಿತಿರಿ ಇಲ್ಲಿ

ಕನಸುಗಳೆಲ್ಲಾ ಕಮರಿ
ಸತ್ತು ಹೋದುವು

ಎದೆ ತುಂಬಿ ಗೋರಿಗಳನ್ನು
ಕಟ್ಟಿ ಹೋದುವು
ಗೋರಿಗಳನು ಕಾಯಲೆಂದು
ನಾನುಳಿದಿದ್ದೇನೆ
ಅಲ್ಲಲ್ಲಿ ಬಿದ್ದ ಎಸಳುಗಳನ್ನು
ಗೋರಿಗೇರಿಸುತ್ತೇನೆ.
ಎಷ್ಟೆಂದರೂ ಪವಿತ್ರವಾದ ಜಾಗ
ಕಾಯುವುದು ಕರ್ತವ್ಯವೆಂದಿದ್ದೇನೆ.

ಹೊಸತನೊಂದ ಕೊಟ್ಟು ಹೋಗು
ಹಳೆಯದನ್ನು ಹೊತ್ತು ಹೋಗು
ಬರಿದೆ ಬಂದು ಹೋಗುತಿರುವೆ
ವರುಷಕೊಮ್ಮೆ ಭೂಮಿಗೆ

ಹರುಷವೆಂಬ ತಿನಿಸಿಗಾಗಿ
ವರುಷ ವರುಷ ಕಾದೆ ನಾನು
ಕರುಣೆ ತೋರಿ ಹರಸೋ ನನ್ನ
ಬೆಲ್ಲ ಬೆರಸು ಬಾಳಿಗೆ.

ಇಂತಹ ಅನೇಕ ಮನೋಜ್ಞವಾದ ಸಾಲುಗಳನ್ನು ಉದಾಹರಿಸಬಹುದು. ಇದು ವೈದ್ಯ ಕ್ಷೇತ್ರದಲ್ಲಿ, ಸಮಾಜ ಸೇವೆಯಲ್ಲಿ ನಿರತರಾಗಿದ್ದ ಸಬಿತಾ ಅವರು ಬಹಳ ಹಿಂದೆಯೇ ಹವ್ಯಕ ಭಾಷೆಯ ಸೊಗಡನ್ನು ಸಾರುವ 'ಗೆದ್ದಳು ಕಾವೇರಿ' 'ಮುಗಿಲು ಬಿರಿಯಿತು' ಮೊದಲಾದ ಕೃತಿಗಳ ಮೂಲಕ ಸಾಹಿತ್ಯಲೋಕದಲ್ಲಿ ಮಿಂಚಿನ ಸಂಚಲನವನ್ನುಂಟು ಮಾಡಿದವರು. ಅವರು ಮೂಲತಃ 'ಕಾಸರಗೋಡಿ' ನವರೆಂಬುದು ನಮಗೆಲ್ಲ ಹೆಮ್ಮೆಯ ವಿಷಯ. ಸಂಪರ್ಕದ ಕೊರತೆಯೇ ಕಾರಣವಾಗಿ ಕನಿಷ್ಠ ಗೌರವವನ್ನಾದರೂ ಅವರಿಗೆ ಸಲ್ಲಿಸಲು ಸಾಧ್ಯವಾಗದಿದ್ದ ಕೊರಗು ಈ ಮೂಲಕ ಆಂಶಿಕವಾಗಿಯಾದರೂ ನಿವಾರಿಸಲ್ಪಡುತ್ತಿರುವುದು ಮನಸ್ಸಿಗೆ ಸಮಾಧಾನವನ್ನು ತಂದಿದೆ.

ಈ ಪರಿಶ್ರಮಕ್ಕೆ ಮುಖ್ಯ ಕಾರಣಕರ್ತರು ಹಿರಿಯರೂ ಆತ್ಮೀಯರೂ ಆದ ಡಾ.ಎಂ.ಬಿ ಮರಕಿಣಿಯವರು ಏಕಕಾಲದಲ್ಲಿ ಸ್ವತಃ ಶ್ರೇಷ್ಠ ವೈದ್ಯರೂ ಸಾಹಿತಿಯೂ ಆದವರು– ಡಾ.ಸಬಿತಾ ಮತ್ತು ಡಾ.ಎಂ.ಬಿ. ಮರಕಿಣಿಯವರು ಸಾಹಿತ್ಯ ಪ್ರಪಂಚದಲ್ಲಿ ಮಿನುಗಿದ ವೈದ್ಯಲೋಕದ ಅಪೂರ್ವ ದಂಪತಿಗಳು. ಅವರು ಸಂಸ್ಕೃತಿ ಪ್ರಿಯರೆಲ್ಲರ ಅಭಿನಂದನೆಗೂ ಪ್ರೀತಿಗೂ ಪಾತ್ರರಾದವರು. ಅವರ ಸೇವೆ ನಿರಂತರ ಬೆಳೆಯುತ್ತಿರಲಿ; ಬೆಳಗುತ್ತಿರಲಿ.

**ಡಾ. ರಮಾನಂದ ಬನಾರಿ**

# ಯೌವನಕ್ಕೆ ಆಹ್ವಾನ

ಯೌವನವೆ ಹ್ವಾ ಬಾರಿತ್ತ
ನಿತ್ಯ ಸಂಭ್ರಮ ನಿನಗೆ
ಯೌವನದ ಹುಮ್ಮಸ್ಸೆ
ನೀನು ಚೇತೋಹಾರಿ ನಿತ್ಯಸಿಂಗಾರಿ
ಮೈಮನಕೆ ಸಾರಿ ನಡೆಸುತಿದೆ ಚೆಲ್ಲಾಟ
ಬಗೆ ಬಗೆಯ ಹುಡುಕಾಟ
ಎಲ್ಲ ಸೊಗಸೇ.

ಯೌವನದ ಬಿಸಿರಕ್ತ
ಮಾಡುತಿದೆ ಏನೆಲ್ಲ
ನಿತ್ಯ ಹಸಿರುತೋರಣ ಮನಕೆ
ಕೆರಳುತಿದೆ ಕಾಮನೆಗಳು
ಮನದಿ ದಿನಕೊಂದರಂತೆ

ಮುಪ್ಪೋ ಮನಸಿಗೊಪ್ಪದ ಒಡನಾಡಿ
ದೂಡುತಿದೆ ಬದುಕಿನ ಗಾಡಿ
ಕಮರಿ ನಿಂತಿಹ ವೃಕ್ಷ ಮತ್ತೆ ಚಿಗುರುವುದಿಲ್ಲ
ಬತ್ತಿರುವ ಕೆರೆ ಒಸರಿಲ್ಲ ಮುಂದು

ಮುಪ್ಪೇ ಸಿಂಗಾರ ಬಳಿದು
ಬರಬೇಡ ಸನಿಯಕ್ಕೆ ನನ್ನ
ನೀನು ಮಾಗಿಯ ಕನಸು
ಯೌವನವೋ ಸುಗ್ಗಿಯ ಸೊಗಸು

ಬಟ್ಟಲಿನ ತಳಕಿರುವ
ಅಮೃತ ತೀರುವ ತನಕ
ಮುದಿತನವೆ ಹೋಗು ಮುಂದಕ್ಕೆ
ಬರಬೇಡ ನನ್ನ ಸನಿಯಕ್ಕೆ.

○

# ಮಲ್ಲಿಗೆಯ ಸೌಭಾಗ್ಯ

ಮೆಲ್ಲನೆ ಅರಳಿತು
ಮಲ್ಲಿಗೆ ಮುಗುಳು
ಮುಸ್ಸಂಜೆಯ ಹೊತ್ತಲಿ ಘಮಘಮಿಸಿ
ಬೀಸುವ ಗಾಳಿಗೆ
ಕಂಪನು ಹಂಚಿತು
ಊರಿನ ಕೇರಿಯ ಮನೆಗಳಿಗೆ
ಹಸಿರಿನ ಹಾಸಲಿ ಉಸಿರಿನ ತಾರೆ
ತಿಂಗಳ ಬೆಳಕಲಿ ಕುಣಿದಾಡಿದವು
ಮುಡಿಗೇರುತ ಮೆರೆದವು
ಜಾಜಿಯ ಹೂವುಗಳು

ಮಹದೇವನ ಕೊರಳನು ಮುತ್ತಿತು
ಕಸ್ತೂರಿ ಮಲ್ಲಿಗೆ ದಳದೆರೆದು
ದುಂಡು ಮಲ್ಲಿಗೆಯ ದಂಡೆಯ ಕಟ್ಟಿ
ನವ ವಧುವಿಗೆ ಜಡೆ ಮುಡಿಸಿದರು
ಹರ್ಷದಿ ನಲಿಯುವ ಬಸಿರಿನ ಉಡಿಯಲಿ
ತುಂಬಿತು ಹೊಸ ಕನಸು

ಬೆಳಗಿನ ಜಾವದಿ ಮಲ್ಲಿಗೆ ಮುದುಡಿತು
ಹರ್ಷೋನ್ಮಾದದ ಮುದ ಸನ್ಮಾನದ
ಗಳಿಗೆಯದೋ ಸರಿದಿತ್ತು
ಮಲ್ಲಿಗೆ ಹೂವಿನ
ಸುಂದರ ಬಾಳಿನ
ಕಿರುಗಳಿಗೆಯ ಸೌಭಾಗ್ಯವೆ ಸಾಲದೆ
ನೆನಪನು ತಂಪಿಸಲು
ಬದುಕನು ಸೊಂಪಿಸಲು

○

## ಗಾಳಿಯೊಡನಾಟ

ಈ ಗಾಳಿಗೆ ನಾನು ಎಲ್ಲವನ್ನೂ ತಿಳಿಸಿದ್ದೇನೆ :
ರಭಸದಲಿ ಬೀಸುವಾಗಲೂ
ಮೈಯೊಡ್ಡಿದ್ದೇನೆ
ಪಿಸುನುಡಿದು ಬಂದಾಗಲೂ
ಆಲಿಸಿದ್ದೇನೆ
ಹೊಸಗಾಳಿಯಾದಾಗ
ಆದರಿಸಿದ್ದೇನೆ
ಸುಳಿಗಾಳಿಯಲಿ ಕಂಪಿಸಿ
ನಡುಗಿದ್ದೇನೆ.

ಹೆಚ್ಚೇಕೆ
ಗಾಳಿಯನು ಸದಾ
ಸೇವಿಸುತ್ತಿದ್ದೇನೆ
ಉಸಿರಾಗಿ ಒಳಹೊರಗು
ಓಡಾಡಿಸಿದ್ದೇನೆ.

ಗಾಳಿ ಬಾರದೆಡೆಯಲ್ಲಿ
ನಲುಗಿದ್ದೇನೆ
ಗಾಳಿ ಮಾತಿಗು ಕಿವಿಯ
ನಿಮಿರಿದ್ದೇನೆ
ಗಾಳಿಯೊಡನಾಟದಲಿ
ನೋವ ಮರೆತಿದ್ದೇನೆ
ಗಾಳಿಗೂ ನನಗೂ ಗಾಢ ಸಂಬಂಧ
ಗಾಢ ನಿದ್ರೆಯಲ್ಲೂ ತಬ್ಬಿ ಮಲಗುತ್ತಿದ್ದೇನೆ.

O

## ಬೆಟ್ಟ – ಸಾಗರ

ಬೆಟ್ಟಕ್ಕೆ ಭ್ರಮೆಯಾಗಿ ಸಾಗರವ ಕರೆದು
ಮಿತ್ರನಾಗು ಎಂದು ಬೇಡಿಕೊಂಡಿತು

ಸಾಗರವೋ ಭೋರ್ಗರೆಯಿತು
ಏನು? ನನ್ನ ನಿನ್ನ ಸ್ನೇಹವೆ?
ನೀನೆಲ್ಲಿ ನಾನೆಲ್ಲಿ?
ನನ್ನಾಳವ ನೋಡು
ತುಂಬಿರುವ ಜಲಚರ, ಅವಿತಿರುವ ನಿಧಿ
ಎಷ್ಟೆಂದು ಲೆಕ್ಕವಿದೆಯೆ?

ನಿನ್ನ ಶಿಖರವೋ ಬೋಳು ಬೋಳು
ಒಂದಿಷ್ಟು ಸೊಪ್ಪು-ಸದೆ ಕಾಡು
ನಿನ್ನೊಡಲೊಳೇನಹುದು ಮಣ್ಣು ಮರಳು
ನಿನಗೆ ಮರುಳು ಎಂದು ಹೀಯಾಳಿಸಿತು.

ಬೆಟ್ಟಕ್ಕೆ ನೋವಾಯಿತು
ನನ್ನೊಡಲ ನೀರನದಿಗಳ ಸಾಲು ನದಿ ಮಾಡಿ
ನಿನಗೆ ಧಾರೆಯನೆರೆದೆ ಸಾಲದೆ?

ಅದನು ನುಂಗಿ ನೀನು ಉಬ್ಬಿಕೊಬ್ಬಿ
ತಿಂದ ಮನೆಗೆ ಕನ್ನವಿಕ್ಕಿ
ಆಹಾ ನೀನು ಬಲಿತುಬಿಟ್ಟಿಹೆ!
ಎಂದು ಹಲುಬಿಕೊಂಡಿತು.

ಒದರಬೇಡ, ಕೆದರಬೇಡ, ತೋಳನೆತ್ತಿ
ಒಗೆದುಬಿಡುವೆ ಕ್ಷಣದಿ ನಿನ್ನ ಬಗಿದು ತೆಗೆದು
ನಿನ್ನ ಹೆಸರಿನಳಿಸಿ ನಾನೆ ಶಾಶ್ವತ ಉಳಿಯುವೆ ...

ಬೆಟ್ಟ ಉಳಿಯಲಿಲ್ಲ ಮುಂದೆ ಸೊರಗಿ ಕರಗಿ ಕರಗಿತು,
ಮೀನಿನಂತೆ ತೇಲಲಿಲ್ಲ ಸತ್ತು ಸುಣ್ಣವಾಯಿತು.

○

## ಹುಚ್ಚು ಮನಸು

ಅತ್ತಿತ್ತ ಓಡುವುದು ಹುಚ್ಚು ಮನಸಿನ ನಾಯಿ
ಗೂಟಕ್ಕೆ ಕಟ್ಟಿದರು ಹಗ್ಗವನು ಹರಿದೊಗೆವ ನಾಯಿ

ಐಸಿರಿಯನರಸುತ್ತ
ದೊರಕಿದರೆ ತಪಿಸುತ್ತ
ವೈರಾಗ್ಯವೇ ಭಾಗ್ಯವೆನ್ನುತ್ತಿತ್ತು
ಸಂಸಾರ ಸಾಗರದಿ
ಮುಳುಗುತ್ತ ಏಳುವುದೆ
ಬದುಕಿನಾ ಬಗೆಯೆಂದು ಬೊಗಳುತ್ತಿತ್ತು.
ಗಂಧ ಚಂದನವ ಹಣೆ ತುಂಬ ತೀಡಿ
ಹೆದರದಲೆಹಾಕಿತ್ತು
ದೇವರಿಗು ಪಂಗನಾಮ !
ಹಣತೆಗಳ ಹಚ್ಚಿಟ್ಟು ಆರತಿಯ ಬೆಳಗುತ್ತ
ಸಾಕಷ್ಟು ಎಣ್ಣೆಯನು

ಕದ್ದುಕೊಂಡಿತ್ತು.
ಮಂತ್ರ ತಂತ್ರವಪಠಿಸಿ ಜಪಮಾಲೆ ತಿರುವುತ್ತ
ಕಾಣಿಕೆಯ ಡಬ್ಬಿಯನು
ಕಯ್ಯಾರೆ ಒಡೆದಿತ್ತು.
ದೇವಳದ ಬದುಕೆಲ್ಲ ತನ್ನದಾಗಿಸಿಕೊಂಡು
ಮೂಢ ಭಕ್ತರ ಗುಂಪ
ಸೂರೆಗೈದಿತ್ತು.
ಮರ್ಕಟದ ಈ ಮನಸು
ಬರಿ ಬುರುಡೆ ಬುತ್ತಿ
ಬಿಟ್ಟಿ ತಿನ್ನಲು ಬರದ
ಹಾಳು ಹಳಸಿದ ಹುಗ್ಗಿ.

## ತೃಪ್ತಿ – ಸಂತೃಪ್ತಿ

ಎಷ್ಟು ಸುಖಿಯೋ ನಾನು
ಬರೆಯಲೇನಿದೆ ?
ಕುಡಿದು ಕುಡಿದು ದಣಿಯಲೆಂದು
ಹರಿವ ತೊರೆಯ ನೀರಿದೆ.
ಸುಖದ ನಿದ್ದೆ ಬರಲಿ ಎಂದು ಮರದ ನೆರಳು
ಮೈಯ್ಯ ಹೊದ್ದಿದೆ.
ಬೆವರು ಸೆಖೆಯ ತಡೆಯಲೆಂದು ಗಾಳಿ
ತಂಪ ತರುತಿದೆ
ಮನಕೆ ಮುದವ ನೀಡಲೆಂದು ಹಕ್ಕಿ
ಗೀತೆಗಳನು ಹಾಡಿದೆ
ಬೆಳಕ ನೀಡಲೆಂದು ಸಾಲು ಚುಕ್ಕಿ
ಮೇಲೆ ಮಾಲೆ ಕಟ್ಟಿದೆ
ತಿಂದು ಸವಿದು ದಣಿಯಲೆಂದು ಮರದ
ಪಕ್ವ ಫಲವಿದೆ

ಹರಿದ ಪಂಚೆಯಿಂದ ನನ್ನ ಮಾನ
ಮುಚ್ಚಿಕೊಂಡಿದೆ
ಮಗುವ ಕೊಟ್ಟ ಮಡದಿಯನ್ನು ತುಂಬು
ಮನದಿ ಹರಸಿದೆ
ದುಡಿವ ರಟ್ಟೆ ಕೊಟ್ಟ ಜನ್ಮದಾತರಿಗೆ
ಮತ್ತೆ ಮತ್ತೆ ನಮಿಸುವೆ

ಬದುಕು ನನಗೆ ಕೊಟ್ಟುದೆಲ್ಲ
ಚಿನ್ನ ಬೆಳ್ಳಿ ಕಣಜವೆ.
ನನ್ನ ಬದುಕು ಕಾಯುತಿರುವ
ವಜ್ರಕವಚವೆ!

○

## ಕಾಯಕ

ಸೊಬಗಿನ ಪಟ್ಟೆ ಸೀರೆಯ ನೇಯಲು
ಗೂಡನು ಕಟ್ಟಿದ ರೇಷ್ಮೆಯ ಹುಳುಗಳು
ಕುದಿಯುವ ನೀರಲಿ ಬೇಯುತ ಸತ್ತುದು
ಮೆರೆದಾಡುವ ಮಹಿಳೆಗೆ ತಿಳಿದಿದೆಯೆ?

ಶ್ರೀಗಂಧದ ಗಿಡವನೆ ಕಡಿದು
ದಿನದಿನವೂ ಕೊರಡನು ತೇದು
ಗುಡಿಯಲಿ ಮೂರ್ತಿಗೆ ಬಳಿಯುವ ಭಕ್ತಗೆ
ಒಣಗಿದ ಗಿಡಗಳ ನೆನಪುಂಟೆ?

ಹನಿಎಣ್ಣೆಯ ಹಾಕಿ ಹಚ್ಚಿದ ಹಣತೆ
ಶಕ್ತಿಗು ಮೀರಿದ ಬೆಳಕನು ಬೀರಿ
ನಂದಿತು ಬದುಕಿನ ಕೊನೆಯುಸಿರೆಳೆದು
ಕರಟಿದ ಬತ್ತಿಯ ಗಣಿಸಿದರುಂಟೆ?

ಹರಿಯುತ ಸಾಗಿದ ತುಂಬಿದ ಹೊಳೆಯು
ಇಕ್ಕೆಲದಲಿ ಸವಿನೀರನು ಉಣಿಸಿ
ಹಸಿರಿನ ಪೈರಿಗೆ ಬೆಳೆಯಲು ಹೇಳಿ
ತನ್ನೊಡಲೇ ಬತ್ತಿತು ಎಂದತ್ತಿತೆಹೇಳಿ?

ಹಗಲಿಲಿ ಸೂರ್ಯನು ಮೊಗೆದಿಹ ನೀರನು
ಮಳೆಗಳ ರೂಪದಿ ಕರಗಿಸಿ ಸುರಿಸಿ
ಬರಿದಾಗಿದೆ ತನ್ನೆದೆ ಎನ್ನುತ ಮೋಡವು
ಅಳುತ್ತಲೆ ಅಡ್ಡಿಯ ತೆಗಯಿತೆ ಹೇಳಿ?

ಪುಷ್ಪರಸವನು ಅರಸುತ ಬಲುದೂರಕು ಹೋಗಿ
ತಂದಿರಿಸಿದ ಮಕರಂದವು ಮಧುವಾಗುತ ಬರಲು
ಗೂಡನೆ ಕೊಯ್ಯುತ ಕೊಂಡೊಯ್ದನು ಮನುಜ
ಎನ್ನುತ ಜೇನ್ನೊಣ ಅತ್ತವೆ? ಸತ್ತವೆ? ಬಿಟ್ಟವೆ ಕಾಯಕವ?

O

## ಭಾಗ್ಯಲಕ್ಷ್ಮಿಯ ಚೇಷ್ಟೆಗೆ ....

ಓ ಲಕ್ಷ್ಮೀ ಭಾಗ್ಯಲಕ್ಷ್ಮೀ ನಿಲ್ಲು ನಿಲ್ಲಲ್ಲಿ
ಇಷ್ಟು ದಿನ ತಡೆಯದೇ ಬಿಟ್ಟುದು ನನ್ನದೆ ತಪ್ಪು
ಎಲ್ಲೆಲ್ಲೋ ಸುತ್ತಾಡಿ, ಅಲ್ಲಲ್ಲಿ ಮೆಲುಕಾಡಿ
ಮತ್ತೆ ಮುಖ ತಿರುಗಿಸುತ್ತಿರುವೆಯಾ ಖೋಡಿ
ಚಿನಿವಾರನ ಮುಂದೆ ಹಲ್ಕಿಸಿದು ಮುಸಿಮುಸಿ ನಕ್ಕು
ಪಾತ್ರೆ ಪಗಡೆಯ ಮೇಲೆ ಕಣ್ಣು ಹಾಯಿಸಿ ಬಂದು
ಜವಳಿಯಂಗಡಿಯವರೆಗೆ ಕಣ್ ಹೊಡೆದು
ಬಂದಿರುವೆಯಲ್ಲಾ. ಏನು ಹೇಳಲಿ ನಿನಗೆ !

ಎಲ್ಲರದೂ ಒಂದೇ ದೂರು
ನಾನೊಬ್ಬ ಗಂಡ, ದಂಡ, ಕೂಳುಮುಕ್ಕ
ಹಿಡಿತವಿಲ್ಲದ ಒಡೆಯ ಎಂದಲ್ಲವೇ
ನಿನ್ನದೀ ಬಗೆಯ ಕಣ್ಣುಮುಚ್ಚಾಲೆ!
ಸಿಕ್ಕಿದ್ದೀಯಾ ಇಂದು, ಕಾಲೆಳೆದು ಜಗ್ಗಿ
ಕಟ್ಟಿ ಹಾಕುತ್ತೇನೆ ಬಾಜಿರಕಂಭಕ್ಕೆ
ಎಲ್ಲಿಗೋಡುತ್ತಿ, ಆಟವಾಡುತ್ತಿ ನೋಡೋಣ.

ಅವರಿವರ ಮನೆಗಳಲಿ ಕಸಮುಸುರೆ ಹೆಕ್ಕಿ ತಿಕ್ಕಿ
ಎಂಜಲನು ನೆಕ್ಕಿದರು ನಿನಗಿಲ್ಲ ಲಜ್ಜೆ ಕುಬ್ಜೆ
ನನ್ನ ಮನೆಯೊಳಗೆ ಕಾಲಿಡಲು ಮಾತ್ರ ನೀನೊಲ್ಲೆ
ಯಾರದೋ ಮನೆಯಲ್ಲಿ ಕಾಲ್ಚಾಚಿ ಕುಳಿತಾಗ
ಇಲ್ಲದಿಹ ನಾಚಿಕೆ ನನ್ನ ಮನೆ ಎಂದೊಡನೆ
ಒಂದೆಸಮ ಬಂದಡರುತ್ತಿದೆ, ತೊಡರುತ್ತಿದೆ ಅಲ್ಲವೆ?

ಬಾಗಿಲತನಕ ಬಂದು ಕ್ಷಣಕಾಲ ಹಣಿಕಿ
ಉಣ್ಣದೆಯೆ ತಿನ್ನದೆಯ ಓಡುವವಸರ ನಿನಗೆ
ಅದಕೆಂದೆ ಈ ದಿವಸ ಹಿಡಿಯುತ್ತೇನೆ ನಿನ್ನನ್ನು
ನನ್ನ ಮನೆಗೂಟಕ್ಕೆ ಕಟ್ಟಿಹಾಕುತ್ತೇನೆ ನೋಡು
ಅಲೆದಲೆದು ಮುಪ್ಪಾದೆ, ಸಾಕು ಇದ್ದು ಬಿಡು ಇಲ್ಲೆ
ನನ್ನ ಮನೆಯೊಳಗೇ ಬಿದ್ದಿರು
ಮುಗಿಯಿತು ನಿನ್ನ ಚೇಷ್ಟೆ.

○

# ಕರೆಯ ಬಂದವರು

ಯಾರಿದ್ದೀರಿ ಒಳಗೆ?
(ಅರವತ್ತು ದಾಟಿದವರು)
ಕರೆದೊಯ್ಯಲು ಬಂದಿದ್ದೇವೆ
ನಮ್ಮೂರಿಗೆ
ದಿಬ್ಬಣವ ತಂದಿದ್ದೇವೆ
ಸಿಂಗರಿಸಿ ಕೊಂಡೊಯುತ್ತೇವೆ
ಬ್ಯಾಂಡ್ ಬಾಜೇ ಸಿದ್ಧವಿದೆ
ಮದುವೆ ಮಂಟಪದಂತೆ
ಸಿಂಗಾರದೊಡವೆ ತಂದಿದ್ದೇವೆ
ಬಿಳಿಯ ಅರಿವೆ!
ಯಾರಿದ್ದೀರಿ ಒಳಗೆ, ಸದ್ದಿಲ್ಲದೆ ಬನ್ನಿ
ಎಂಬ ಕರೆಯೊಮ್ಮೆ ಕೇಳಿಸಿತು
ಮುಸುಕು ಮುಂಜಾವಿನಲಿ
ಬಿಗಿ ಮುಸುಕು ಹೊದ್ದು
ಉಸಿರು ಬಿಗಿಹಿಡಿದು
ಮುದುಡಿ ಮಲಗಿದೆ ನಾನು
ಚಳಿಗಾಲದಲ್ಲೂ ಬೆವತು ಬೆಂಡಾದೆ
ಥರಥರ ನಡುಗಿ ಒದ್ದೆಯಾದೆ
ಎಷ್ಟು ದಿನ ಕಾದಿದ್ದರೋ
ನನಗಾಗಿ ಹೊರಗೆ
ಎಷ್ಟೋ ಬಾರಿ ಬಾಗಿಲು ಬಡಿದು
ಮರುದನಿಗೆ ಆಲಿಸುತ್ತಲೇ
ಇರುತ್ತಾರೆ ಅವರು
ಅದು ಅವರ ಚಟ !



# ಕೊನೆಯ ಲೆಕ್ಕ

ನಿನ್ನ
ಬಸಿರಿಂದ ಬಂದವರು
ಅದುವೆ ಸೆರೆಯೆನ್ನುವರು
ಮಳೆಗಾಳಿಯಲಿ ನೆನೆದು
ಸ್ನಾನವಾಯ್ತೆನ್ನುವರು
ಕಲ್ಲಿಗೇ ಕೈ ಮುಗಿದು
ಪೂಜೆ ಮುಗಿಸಿದನೆಂಬರು
ತಾಳ ತಂಬುರಿ ಮೀಟಿ
ದೇವರನು ಕಂಡವರು
ದೇವನಾ ಒಡಹುಟ್ಟು
ತಾವೆಂದು ತಿಳಿದುಬಿಟ್ಟವರು
ಜಗದೊಳೊಬ್ಬರಿಗೊಂದುಗುಣ
ಸ್ವಾರ್ಥಿಗೋ ನೂರೊಂದುಗುಣ!
ಯಾರಿಗೆ ಯಾರಿಲ್ಲ
ಯಾವುದೂ ನಿಜವಲ್ಲ
ಸಾವಿನ ಬಟ್ಟಲಲ್ಲಿ
ಬಿದ್ದಿರುವ ಕೀಟಗಳು
ವಿಲವಿಲನೆ ಒದ್ದಾಡಿ
ಹಾಲಾಹಲದ ಸೊಗಸ
ಮನದಣಿಯೆ ಉಂಡವರು
ಬದುಕಿ ಮುನ್ನಡೆಯುವುದು
ಸಾವಿನಗುರಿಯತ್ತ
ದಟ್ಟ ಹೆಜ್ಜೆಯ ನಡುವೆ
ಕೊನೆಯಾದುದೇ ಲೆಕ್ಕ.

# ಈ ಮರ ಮಾಮರ

ಈ ಮರವನು ಕೇಳು ನಾನಾರು ಎಂದು
ಬಾಲ್ಯವನು ಕಳೆದಿದ್ದೆ
ಈ ಮರದ ನೆರಳಲ್ಲಿ
ಯೌವನವ ಪಡೆದದ್ದು
ಈ ಮರದ ಬೇರಲ್ಲಿ
ಕೊರಳಮಾಂಗಲ್ಯ ಬಿಗಿದಿದ್ದು
ಈ ಮರದ ಸಾಕ್ಷಿಯಲ್ಲೇ.

ಈ ಮರವ ತಬ್ಬಿರುವ ಮಲ್ಲಿಗೆಯ ಬಳ್ಳಿ
ಹೂವ ಕೊಟ್ಟಿತು ನನಗೆ
ಜಡೆ ತುಂಬ ಮುಡಿಯಲೆಂದು
ಮಿಡಿಕಾಯಿ ಹಣ್ಣುಗಳ
ತಾನಾಗಿ ನೀಡಿತ್ತು ತಿನ್ನಲೆಂದು
ಜೋಕಾಲಿಯನು ಕಟ್ಟಿ
ಜೀಕಲೂ ಬಿಟ್ಟಿತ್ತು ನನಗೆ

ಈ ಮರದ ಬುಡದಲ್ಲಿ ಕುಳಿತು
ಮೈ ನೆರೆದ ನಾನು
ಶೃಂಗಾರ ರಾಜ್ಯಕ್ಕೆ ನಾಂದಿಯಾದೆ
ಹಲವು ಕನಸನು ಕಂಡ
ಹರಿಣಿ ನಾನಾದೆ

ನನ್ನ ದಿಬ್ಬಣ ಕೂಡ
ಈ ಮರದ ಕೆಳಗೇ
ಬಂದು ನೆರೆದಿತ್ತು ನೋಡು
ನವ ದಂಪತಿಯ ಹರಸಲಿಕೆ

ಈ ಮರವೆ ಚಪ್ಪರವಾಯ್ತು
ಉಂಡುಟ್ಟು ನಲಿದು
ಊರನ್ನು ಬಿಡುವಾಗ

ಕಣ್ಣಾಲಿ ಹರಿದಿತ್ತು
ಈ ಮರವ ಬಿಗಿದಪ್ಪಿ
ಕಂಬನಿಯ ತೊಡೆದೆನಿಲ್ಲೇ.
ವರುಷ ಸರಿಯುವ ಮೊದಲೆ
ನಾ ವಿಧವೆಯಾದೆ
ನರಕ ದುಃಖದ ನೋವ
ಅನುಭವಿಸಿ ಬಂದೆ
ಎದೆಯ ಬೇಗುದಿಯೆಲ್ಲ
ಈ ಮರಕೇ ನಾನು ಅರುಹಿಕೊಂಡೆ.

ಕನಸುಗಳ ನನಸುಗಳ
ಕಲುಸುಮೇಲೋಗರವಾಯ್ತು
ನನ್ನ ಬದುಕು !
ಈಗಲೋ ನಾನು
ನಿರ್ಭಾಗ್ಯ ಮುದುಕಿಯಾಗಿ
ಕ್ಷಣಕ್ಷಣವನೆಣಿಸುತ್ತ
ಬಿದ್ದಿದ್ದೇನೆ ಇಲ್ಲೇ
ಈಮರದ ನೆರಳಿನಲ್ಲೇ.

ನನ್ನ ಬಾಳಿಗೆ ಸಾಕ್ಷಿಯಾಗಿದ್ದು
ನೋವು ನಲಿವನು ಕಂಡು ಬಹುಕಾಲ ಬದುಕಿ
ಹೆಮ್ಮರವಾಗಿ ಬೆಳೆದು ನಿಂತ ಈ ಮರವು
ನನಗೊಂದು ಕೊರಡ ಕೊಡಲಾರದೇ
ಎಂದು ಕಾಯುತ್ತ ಇದ್ದೇನೆ ಇಲ್ಲಿ.

# ಹೋರಾಡುತ್ತಲೇ ಸಾಗು

ನಿನ್ನ ಕಣ್ಣಂಚಿನಲಿ ನೀರ ಹನಿ ತುಂಬಿಹುದು
ನಿನ್ನ ಮುಖಛಾಯೆಯಲಿ ನೋವಿನ ಗೆರೆ ಮೂಡಿಹುದು
ನನ್ನ ತುಟಿಗಳ ನಡುವೆ ಮೂಕವೇದನೆ ಕುಳಿತಿದೆ
ಗೆಳತೀ, ನಿನಗಾಗಿರುವುದಾದರೂ ಏನು?
ಹೀಗೆ ಮುಖಮುಚ್ಚಿ ಮೌನದಳುವನು ಹೊತ್ತು
ಮಾಡುವೆಯಾದರು ಏನು?
ಏಳು, ಧೈರ್ಯವ ತಾಳು
ದಾಟು ಹದಿನಾರು ಕೋಟೆಗಳ
ಸಾರಿಬಿಡು ಯುದ್ಧಕ್ಕೆ ಸಿದ್ಧಳೆಂದು
ನಿನ್ನೊಳಿದೆ ಖಡ್ಗ, ಹೃದಯಸಾಮರ್ಥ್ಯ
ಕದನಕಣಿಯಾಗು ಈಗ ನೀನು
ಕುರುಡು ಕಣ್ಣಿನ ನೋಟ, ಕುಹಕ ನುಡಿಗಳ ಮಾಟ
ಬಣ್ಣ ಕಟ್ಟಿದ ಕತೆಗೆ ಅಂಜಬೇಡ.
ಹೋರಾಟದಲಿ ಧುಮುಕಿ ಗೆಲವನ್ನು ಬಯಸಿದರೆ
ಕಾದಾಡುತ್ತಲೇ ಮುಂದೆ ಮುಂದೆ
ಸಾಗುವುದೊಂದೆ ಉಳಿದಿರುವ ದಾರಿ.

ಅಂಜುಗುಳಿಯಾಗಿ ಹೆಜ್ಜೆ ಹಿಂದಿಡಬೇಡ, ಹೋರಾಡು
ಬಾಳಿ ಬದುಕುವ ಹಕ್ಕು ನಿನಗೂ ಉಂಟು
ಅದನಾರೂ ಕಸಿದುಕೊಳ್ಳಲು ಬಿಡಬೇಡ ಗೆಳತಿ
ಕಲಿಯಾಗಿ ಎದೆಯ ಗುಂಡಿಗೆಯಲ್ಲಿ
ಬಿಸಿರಕ್ತ ಚಿಮ್ಮುತ್ತ ಹೋರಾಡುತ್ತಲೇ ಸಾಗು
ಗೆಲುವಿನೆಡೆಗದೋ ಗೆಳತಿ ಅದು ನಿನಗೆ ಲಭ್ಯ
ಅಡಿಯಹಿಂದಿಡೆ ನರಕ ಎಂಬುದನು ಮರೆಯಬೇಡ!

# ಗಿಲಿಗಿಲಿ ಗೆಜ್ಜೆಯ ನಾದ

ಗಿಲಿಗಿಲಿ ಗೆಜ್ಜೆಯ ನಾದಕ್ಕೆ
ಚಲಿಸಿತು ಬಂಡಿಯು ತಾಳಕ್ಕೆ
ಎಳೆದವು ಹುಮ್ಮಸ್ಸಿನ ಹೋರಿಗಳು
ಮೈ ತುಂಬಿದ ಚೆಂದದ ಎತ್ತುಗಳು

ಕಟಕಟ ಸದ್ದಿಗೆ ಕಿವಿನಿಮಿರಿ
ಒಡೆಯನ ಹಾಡನು ಆಲಿಸುತ
ಹುಂ ಜುಂ ಎನ್ನುವ ಉಲಿಯನ್ನು
ಮೆಲುಕಾಡುತ ಮುಂದಕೆ ಸಾಗಿದವು.

ದಾರಿಯು ಸವೆಯಿತು ನಿಮಿಷಕ್ಕೆ
ಹೋಯಿತು ಬಂಡಿಯು ಮುಂದಕ್ಕೆ
ಕೊರಳಿನ ಗೆಜ್ಜೆಯ ನಾದದಲಿ
ಗಮ್ಮತ್ತಿನ ಎದೆತಾಳದಲಿ

ಹೋಹೋಹೋ ಎನ್ನುವ ಧ್ವನಿ ಕೇಳಿ
ನಿಂತಿತು ನಡಿಗೆಯು ಕ್ಷಣದಲ್ಲೇ
ನೊಗವನು ಬಿಚ್ಚಿ ಹಗ್ಗವ ಸಡಿಲಿಸೆ
ನೀರನು ಕುಡಿಯಲು ಸಾಗಿದವು

ಮೇವನು ಇಟ್ಟು ಪ್ರೀತಿಯಲಿ
ಬೆನ್ನನು ಸವರಿದ ಮಮತೆಯಲಿ
ಮಲಗಿರಿ ಮಕ್ಕಳೆ ನೆರಳಲ್ಲಿ
ಸಾಗುವ ಮುಂದಕೆ ಗಳಿಗೆಯಲಿ

ಗೋಣನು ಆಡಿಸಿ ಸಮ್ಮತಿಸಿ
ಮೇವನು ಕಬಳಿಸಿ ಮೆಲುಕಾಡುತ್ತ
ಕೊಂಬಿನ ಚೌರಿಯ ಕುಲುಕಾಡುತ್ತ
ಹರ್ಷವ ಸೂಚಿಸಿದವು ಸಹಮತದಿ

ಮುಂದಿನ ಗಳಿಗೆಯೆ ನೊಗದಬಳಿ
ನಿಂತವು ಕೊರಳನು ಬಗ್ಗಿಸುತ
ಗೆಜ್ಜೆಯ ಮಾಲೆಯನಾಡಿಸುತ
ಧನಿಯನು ಎಬ್ಬಿಸಿ ಪಯಣಿಸುತ

## ಜಾತ್ರೆಗೆ ಬಾರೇ ಗೆಳತಿ

ನಮ್ಮ ಊರಿನ ಜಾತ್ರೆಗೆ
ಬರಬೇಕು ನೀ ಗೆಳತಿ
ವರ್ಷಕ್ಕೊಮ್ಮೆಯೆ ಬರುವ ಹಬ್ಬ ನಮ್ಮೂರ ಜಾತ್ರೆ
ಹರ್ಷ ಸಡಗರದಿಂದ
ಊರಿಗೂರೇ ಅಂದು
ಸಂತಸದಿ ಉಬ್ಬಿಕೊಳ್ಳುವ ಹಬ್ಬ ನಮ್ಮೂರ ಜಾತ್ರೆ
ಸುಣ್ಣ ಬಣ್ಣವು ಮನೆಗೆ
ರಂಗು ರಂಗೋಲಿಗಳು
ಬೀದಿ ಬೀದಿಗು ಹಸಿರು ತೋರಣದ ಸಿಂಗಾರ
ಮಲ್ಲಿಗೆಯ ದಂಡೆಗಳು
ಸುಖದಲ್ಲಿ ಆಡುವವು
ಪಟ್ಟೆ ಸೆರಗನು ಹೊದ್ದ ಮುತ್ತೈದೆಯರ ಮುಡಿಗೆ
ಹಣ್ಣು ಹೂ ಎಳನೀರ
ಕೈ ಬುಟ್ಟಿಯಲಿ ತಂದು
ಹರಕೆಯೊಪ್ಪಿಸಿ ಬೇಡುವರು ಮನದಿಚ್ಛೆ ಪೂರೈಸು ಎಂದು
ಹೊಸ ಸಿಂಗಾರದಲಿ ಶೋಭಿಸುವ

ಹಳೆಯ ತೇರಿನೊಳಿಟ್ಟು
ಊರೆಲ್ಲ ಮೆರೆಸುವರು ಉತ್ಸವದ ಮೂರ್ತಿ
ಬೀದಿ ಬೀದಿಗು ಬಂದು
ಮನೆ ಮುಂದೆ ಹಾಯ್ದಾಗ
ಕರ್ಪೂರದಾರತಿಯ ಬೆಳಗದಿಹ ಮಾನಿನಿಯೆ ಇಲ್ಲ
ಬಿರುಸು ಬಾಣ ಸುರು ಸುರು ಬತ್ತಿ
ಮತಾಪು ಪಟಾಕಿಗಳು
ನಕ್ಷತ್ರಕಡ್ಡಿಗಳನುರಿಸಿ ಸುಖ ಪಡುವರಿಲ್ಲಿ
ಜಾತ್ರೆ ನೋಡುವ ನೆಪದಿ
ಸವಾರಿ ಹಾಕಿದ ಗಾಡಿಗಳು
ಮನೆಮಂದಿಯ ತುಂಬಿ ಬರುತಿಹವು ಊರೂರಿನಿಂದ
ಸಡಗರದ ಜಾತ್ರೆಯಲಿ
ಗದ್ದಲದ ಸಂತೆಯಲಿ

ಮಣಿಸರಕು ಹಂಡೆ ಭಾಂಡೆಗಳ ವ್ಯಾಪಾರವಿಲ್ಲಿ
ಬಗೆ ಬಗೆಯ ಸಿಹಿತಿಂಡಿ
ಲಾಡು ಮಿಠಾಯಿ ಜಿಲೇಬಿ
ಹುರಿಗಡಲೆ ಚುರುಮುರಿ ಸೋಡಕ್ಕೆ ಭಾರೀ ಗಿರಾಕಿ
ಸುತ್ತು ರಾಟೆಗಳ ಆರ್ಭಟೆಯುಂಟು
ಬೆಲೂನು ಬೊಂಬೆಗಳು ಸಾಲಾಗಿ ನಿಂತಿಹವು ನೋಡು
ಕಣ್ಣೀರ ಸುರಿಸುವರು
ಹರ್ಷದಿಂ ತುಡಿಯುವರು
ಹೊಸ ಸುದ್ದಿ ಕೇಳಿ ಹೇಳುತ ಬಂಧು ಬಾಂಧವರು
ಬೆಳೆದು ನಿಂತಿಹ ನಿನ್ನ
ಮಗಳಿಗೋ ಆ ತರುಣ
ಸರಿಯಾದ ವರಸಾಮ್ಯ ಎಂದು ಗುರುತಿಸುವರು

ಬಾ ಗೆಳತಿ ಜಾತ್ರೆಗೆ ಗುಟ್ಟೊಂದುಂಟು
ಬರಲಿರುವ ನನ್ನಿನಿಯನನು
ತೋರಿಸುವೆ ನಾ ನಿನಗೆ ಕಣ್ಣಾಸೆ ತುಂಬಿ

ಹರುಷವನು ಹಂಚಿಕೊಳ್ಳಲು ನನಗೆ ಯಾರಿಲ್ಲ ಇಲ್ಲಿ
ಅದಕೆಂದೆ ಒಸಗೆಯನು ಕಳಿಸಿರುವೆ ನಿನಗೆ
ಬಾರೇ ನನ್ನ ಪ್ರಿಯ ಗೆಳತಿ ನಮ್ಮೂರ ಜಾತ್ರೆಗೆ.

# ಮುಗ್ಧ ಮಕ್ಕಳು

ಆ ಶಾಲೆಯ ಮಕ್ಕಳು
ಆಟದಲ್ಲಿ ತಲ್ಲೀನರಾಗಿದ್ದಾರೆ

ಬಣ್ಣ ಬಣ್ಣದ ಬಾವುಟಗಳ ಹಿಡಿದೆತ್ತಿಕೊಂಡು
ಭಾರತ ಮಾತಾಕೀ ಜೈ ಎಂದು
ಒಕ್ಕೊರಲಿನಲ್ಲಿ ಧ್ವನಿಸುತ್ತಿದ್ದಾರೆ.

ಈ ದಿವಸ ದೊಂಬಿ ಗದ್ದಲವೆಂದು
ಕರ್ಫ್ಯೂ ಜಾರಿಯಲ್ಲಿದೆಯೆಂದು
ಇದಕ್ಕಾಗಿಯೇ ಶಾಲೆಗಿದೆ ರಜೆಯೆಂದು
ತಿಳಿಯದಿದೆ ಆ ಮುದ್ದು ಮಕ್ಕಳಿಗೆ
ಸತ್ತವರ ಸಂಖ್ಯೆಯೂ ತಿಳಿದಿಲ್ಲ
ಕೊಂದವರು ಯಾರೆಂದು ಅರಿತಿಲ್ಲ

ಜಾತಿ, ಮತ, ದ್ವೇಷ, ವಿಷಯ – ವೈಷಮ್ಯ
ಎಂದರೇನೆಂದು ತಿಳೀಯದೀ ಮಕ್ಕಳಿಗೆ
ಹಲವು ಜಾತಿಯ ಮಕ್ಕಳು ಸೇರಿ ಆಡುತ್ತಿದ್ದಾರೆ
ಕೂಡಿ ಕಿಲಕಿಲ ನಗುತ್ತಿದ್ದಾರೆ
ಹೂವಿನಂತೆ ಅರಳುತ್ತಿದ್ದಾರೆ
ರಾಜಕೀಯದ ದ್ವಂದ್ವ ಅರಿಯರಿವರು
ಚೆಲ್ಲಿರುವ ರಕ್ತ ಕಲೆಗಳ

ಗುರುತಿಸದವರು ಈ ಮುಗ್ಧಮಕ್ಕಳು
ಈ ಹೂಗಳ ಮೇಲೆ ಬೀಳದಿರಲಿ
ವಿಷ ರಕ್ತ ಬಿಂದುಗಳು
ಜಾತಿ ಮತ ಜ್ವಾಲೆ ಕಮರದಿರಲಿ ಇವರ.

O

# ವಧುವಾಗಿದ್ದಾಳೆ ಮಗಳು

ಮಗಳು ಮಂಗಳಗೌರಿ ವಧುವಾಗಿ ಕುಳಿತಿಹಳು
ಏಳು ಹೆಜ್ಜೆಯ ನಡೆದು ದಾಂಪತ್ಯದಲ್ಲಿ ಕಾಲಿಟ್ಟು ಬಾಳಲೆಂದು
ಮಂದಾರ ಮುಗುಳವಳು, ಮಲ್ಲಿಗೆಯ ಕಂಪವಳು
ಶೃಂಗಾರಕಾವ್ಯಕ್ಕೆ ನಾಂದಿಯಾಗಿಹಳು
ಹಣೆಯಲ್ಲಿ ಕುಂಕುಮವು ಕಿವಿಯಲ್ಲಿ ಬೆಂಡೋಲೆ
ಫಳಫಳನೆ ಹೊಳೆಯುವವು ಅವಳಾಸೆಯಂತೆ
ಅಂಗೈಗೆ ಬರೆದಿರುವ ಮದರಂಗಿ ಚಿತ್ರಗಳು
ಮೂಡಿಪವು ಮನದೊಳಗೆ ನೂರೊಂದು ಕನಸು
ಬೈತಲೆಗೆ ಬಿಗಿದಿಹುದು ಬಾಸಿಂಗ ಪಟ್ಟಿ
ಹಣೆಯ ಮೇಲಾಡುತಿದೆ ಮುತ್ತಿನಾಸರಮಾಲೆ

ಹಸಿರು ಪಟ್ಟೆಯನುಟ್ಟು ಕೆಂಪು ಕುಪ್ಪಸ ತೊಟ್ಟು
ನಡುವಿನೊಡ್ಯಾಣ ಬಿಗಿದ ಚೆಲುವೆಯವಳು
ಕಣ್ಣು ಕಾಡಿಗೆ ತೀಡಿ, ಮಿಂಚು ಸಂಚರಿಸುತಿಹ
ಪುಟ್ಟ ಮೀನುಗಳಾಗಿ ಈಜುವವು ಇಲ್ಲಿ

ನಸುನಗುವು ಹುಸಿಲಜ್ಜೆ ತುಂಬಿರುವ ಕೆನ್ನೆಗಳು
ಹಲವು ಕನಸುಗಳಲ್ಲಿ ರೆಕ್ಕೆ ಬಿಡಿಸಿಹವು
ಸಜ್ಜಾಗಿ ಕುಳಿತಿಹಳು ಸಂತಸದಿ
ಸಪ್ತಪದಿ ತುಳಿಯಲೋ ಕಾತರಿಸುತಿಹಳು

ಹುಟ್ಟಿದೊಡಲನು ತೊರೆದು ಎತ್ತಲೋ ಬದುಕುವಳಿನ್ನು
ಶ್ರೀಗಂಧವಾಗಿಯೇ ಕಂಪ ಬೀರುವಳು
ಜಡೆ ತುಂಬ ಮಲ್ಲಿಗೆಯ ದಂಡೆಯನು ಮುಡಿದಿಹಳು
ಮೆಲ್ಲ ಮೆಲ್ಲನೆ ಹೆಜ್ಜೆ ಮುಂದಕಿಡುತಿಹಳು
ಹಸಿರು ಬಳೆಗಳ ಸದ್ದು ಡಂಗುರವ ಸಾರುವವು
ಹೊಸ ಬದುಕು ನಿನಗೆಂದು ಕಿವಿಯಲುಸುರುವವು

O

## ಗಾಳಿ ಹೇಳಿದ ಚಾಡಿ

ಆಗಸದಲಿ ತೊನೆದಾಡುವ ಬಿಳಿಮೋಡದ ಕಿವಿಯಲಿ
ಉಸುರಿತು ಗಾಳಿಯು ಏನೋ ಚಾಡಿಯ ಮಾತನ್ನು....

ಮೋಡದ ಮುಖ ಕಪ್ಪಿಟ್ಟಿತು
ಕರೆಕರೆಯುತ ಬಿತ್ತರಿಸಿತು
ಬಂಧುಗಳೆಲ್ಲರು ಒಂದೆಡೆ ಸೇರಿ
ಸುರಿಸುತ ಕಣ್ಣೀರಿನ ಕೋಡಿ
ಗುಡುಗುಡಿಸುತ ದನಿಗೈದವು
ಮಿಂಚುತ ಕಣ್ಣನು ತೆರೆಸಿದವು
ಆರ್ಭಟಿಸಿತು ಸಿಡಿಲು, ಉಮ್ಮಳಿಸುತ
ಅತ್ತಿತು ಕರಿಮುಗಿಲು
ಕಣ್ಣೀರನು ತೊಡೆತೊಡೆದು
ಬಸವಳಿದವು ತೋಳುಗಳು

ನೋಡಿತು ಭೂಮಿ ಈ ತಳಮಳ ಕಳವಳವ
ಅಳಬೇಡಿರಿ ಮಕ್ಕಳೆ
ಏನಾಗಿದೆ ನಿಮಗೆ?
ಹೀಗೆಲ್ಲಾ ಅತ್ತು ಸೊರಗಿದರೆ
ಸತ್ತೇ ಹೋಗುತ್ತೀರಿ ಅಷ್ಟೇ
ಗಗನದಲಿ ಹಾರಾಡುತ್ತೀರಿ

ಹಕ್ಕಿಯಂತೆ ರೆಕ್ಕೆ ಬಿಚ್ಚಿ
ಹಾವಿನಂತೆ ಹರಿದು ತೂರಿ
ನೂರು ಬಗೆಯ ಜೀವಿಯಂತೆ
ಕೆದರಿ ಬಿಟ್ಟ ಹತ್ತಿಯಂತೆ
ಸುತ್ತಿ ಸುಳಿದು ಸಾಗುತ್ತೀರಿ
ಬಿಸಿಲಿನ ಕಾವು ಚಳಿಗಾಲದ ನೋವು
ಏನೆಲ್ಲವನ್ನು ಸಹಿಸುತ್ತೀರಿ
ಫಳಫಳನೆ ನಗುನಗುತ ಇರುತ್ತೀರಿ
ಆದರೆ ಇಂದು
ಅಳುತ್ತೀರಿ, ಕಣ್ಣೀರು ತುಂಬಿದ್ದೀರಿ
ಏನಾಗಿದೆ ನಿಮಗೆ?
ಹೇಳಬಾರದೆ ನನಗೆ? ಎನ್ನಲು-
ನಾವು ಜಾರಿಣಿಯರಂತೆ
ಎಲ್ಲರಿಗೂ ಸೂರ್ಯನಾ ಸಂಬಂಧವಂತೆ
ಅವನೊಡನೆ ಚಕ್ಕಂದವಾಡಿ
ಬಸಿರಾದವರಂತೆ........
ಅಷ್ಟೇನಾ
(ಓಹೋ ಇದೊ ಸಮಾಚಾರ)

ಹುಚ್ಚು ಖೋಡಿ ಮಕ್ಕಳೆ
ನೀವು ಬಸಿರಾದರೇನೇ ಬದುಕು
ನಿಮ್ಮ ಬಸಿರಿಂದ ಬಿದ್ದ
ಮುತ್ತು ಹನಿಗಳೇ ಜಗಕೆ
ಜೀವಾಧಾರ, ಧಾರಾಕಾರ!
ನೋಡಿ
ನಾನಿಲ್ಲವೇ ಈಗ
ಎಲ್ಲರೊಡನೆಯೂ ಸಂಬಂಧ ಇರಿಸಿಕೊಂಡು
ಎಂಬ ಮಾತನು ಕೇಳಿಸಿಕೊಂಡು
ನನ್ನಲ್ಲಿ ಹುಟ್ಟಿದವರೇ
ಈ ಪ್ರಪಂಚ ಬ್ರಹ್ಮಾನಂದ......

ಏನಾದರೂ ಆಡಿಕೊಳ್ಳಲಿ, ಒಪ್ಪಂದ ಮಾಡಿಕೊಳ್ಳೋಣ
ನಾವೆಲ್ಲರೂ ಕೂಡಿ ಹಾಕೋಣ ಮೋಡಿ
ಋತು ಚಕ್ರವನು ಎಳೆಯೋಣ ಜೋಡಿಜೋಡಿ

## ವರುಣ ಸಂತಾನ

ವರ್ಷಾಕಾಲದಿ ಸುರಿಯುವ ಮಳೆಯೇ
ನಿನಗೇತಕೆ ಇಂತಹ ಹದ್ದಿಲ್ಲದ ಸೊಕ್ಕು?
ತಟಪಟ ಹನಿಗಳ ಉದುರಿಸಿ ಕೆದರಿಸಿ
ಕಾಣದ ತಮ್ಮಟೆ ಬಾರಿಸುವೆ

ಬಿರುಗಾಳಿಯ ರಭಸವ ಮುಂದಟ್ಟಿ
ಭೋರೆನ್ನುವ ಅಬ್ಬರದಲೆ ನೀ ಬರುವೆ
ಮಿಂಚಿನ ಗೊಂಚಲ ಕೈಯಲಿ ಹಿಡಿದು
ಸಿಡಿಲಿನ ಸರಮಾಲೆಯ ಉಗುಳುತಿಹೆ

ಎಲ್ಲರ ಅಂಜಿಸಿ ಒಳಮನದಲಿ ರಂಜಿಸಿ
ಸುರಿಯುವ ಜಡಿಮಳೆ ನೀನಾಗಿರುವೆ!
ಕೆರೆ ಕೊಳಗಳ ಉದರವ ತುಂಬಿಸಿ
ಒಮ್ಮೆಲೆ ಅವುಗಳ ಬಸಿರಾಗಿಸಿದೆ

ಹನಿ ನೀರಿಗೆ ಬಾಯ್ದೆರೆದಿಹ ಹೊಲಕೆ
ಇಂಪಿನ ತಂಪನು ಲೇಪಿಸಿದೆ
ಸೊರಗಿದ ಗಿಡಮರ ಬಳ್ಳಿಗಳೆಲ್ಲಕೆ
ನಗುವಿನ ಲಾಸ್ಯವನೊದಗಿಸಿದೆ

ಧ್ವನಿಯನು ಕೊಡಮಾಡಿರುವೆ
ಕಿರುತೊರೆಗಳನೆಬ್ಬಿಸಿ ಉಬ್ಬಿಸಿ

ಅಬ್ಬಿಯ ಕುಣಿತಕೆ ಧುಮುಕಿಸಿದೆ
ಕಾರ್ಮೋಡವ ಅಂಜಿಸಿ ಹನಿಗಳ ಸಿಂಚಿಸಿ

ಬಾಂದಳವನೇ ನೀ ದಣಿಸಿರುವೆ
ನೀರುಣಿಸಿದ ಮಣ್ಣಿನ ಮಡಿಲಿಂದಲೆ
ಹಾರಲು ಬಿಟ್ಟಿಹೆ ಹಾತೆಗಳ
ಹಾರುವ ಹಕ್ಕಿಯ ಮುದುಡಿಸಿ

ಮರದೆಲೆ ಬಿಗಿಯುತ ಬಂಧಿಸಿದೆ
ಮೇಯುವ ಹಸುಗಳ ಹಾಯುವ ಪಶುಗಳ
ಹಟ್ಟಿಯ ಚೌಕಟ್ಟಲೆ ನಿಲ್ಲಿಸಿದೆ
ತಡೆಯದ ಚಳಿಯಲಿ ನಡುಗುತಲಿದ್ದರು
ಗದ್ದೆಗೆ ತೋಟಕೆ ಆಳನು ಅಟ್ಟಿರುವೆ
ಒಲೆಯಲಿ ಒಡ್ಡಿದ ಸೌದೆಯ ಸೀಳು
ಉರಿಯಲು ಒಲ್ಲೆ ಎನ್ನುತ್ತಲಿದೆ

ಶಾಲೆಯ ಪಾಠದ ಪರಿವೆಯ ಮರೆತು
ಮನೆಯಲಿ ಮಕ್ಕಳ ಗುಲ್ಲೇ ಗುಲ್ಲು
ಹರಿಯುವ ನೀರಿನ ಸಾಲಿನ ಜತೆಗೆ
ಮಕ್ಕಳ ದೋಣಿಗಳಾಡುತಿವೆ

ಬಣ್ಣದ ಕಾಗದ ತೇಲುತ ಓಡುತ
ಚಿಣ್ಣರ ಹರುಷಕೆ ಕಳೆಯೇರಿಸಿದೆ
ಮನೆಯೊಳಗೆಲ್ಲ ಪಾದದ ಕೆಸರಿನ
ಛಾಪದೊ ನಿಚ್ಚಳ ಕಾಣುತಿದೆ

ಇಳೆಯನು ತುಂಬಿ ತುಳುಕುತಲಿರುವ
ಮಳೆನೀರಿನ ಬಗೆಗಳು ಹಲವು
ಮಕ್ಕಳ ಆಟಕೆ, ಬಿಸಿಲಿನ ಊಟಕೆ
ಹನಿ ಕಡಿಯದ ಮಳೆ ದಿನವೂ

ಕೃಷಿಕಾರ್ಯದ ಜಂಜಾಟಕೆ ಮಾಟಕೆ
ಹೊಸ ಜೀವವ ತುಂಬಿದೆ ಮಳೆಗಾಲ
ಒಡಲಿನ ಕೂಟಕೆ ಹೊಸ ಹೊಸ ಬೇಟಕೆ
ಉನ್ಮಾದದ ಕರೆ ನೀಡಿದೆ ಮಳೆಗಾಲ

ಅದಕೆಂದೇ ಸೊಕ್ಕಿನ ದಿಬ್ಬಣ ತಂದಿದೆ ಮಳೆಗಾಲ
ಕಣ್ಣಿಗೆ ಕಾಣುವ ವರುಣನ ಸಂತಾನ
ಪ್ರತಿ ವರ್ಷವು ಸಂಭ್ರಮದಲಿ ಎದುರ್ಗೊಳ್ಳೋಣ!

○

## ಗ್ರಾಮ ಪಂಚಾಯತಿ – ಮೀಸಲಾತಿ

ರಾಮರಾಜ್ಯದ ಹಾದಿಯಲ್ಲಿ
ಮೊದಲ ಹೆಜ್ಜೆ ಗ್ರಾಮಸ್ವರಾಜ್ಯ
ಅದರ ಬುನಾದಿಯೆ ಪಂಚಾಯತಿ ಪ್ರಪಂಚ

ನಮ್ಮೂರ ಗ್ರಾಮ ಪಂಚಾಯತಿಗೂ
ಆಯ್ಕೆಯಾಗಿದ್ದಾರೆ ಮಹಿಳೆಯರು
ಶೇಕಡಾ ಮೂವತ್ತಮೂರು ಸದಸ್ಯರು
ಕಡ್ಡಾಯವಾಗಿ ಮಹಿಳೆಯರು.
ಇದು ಮೀಸಲಾತಿಯ ವರದಾನ ಹಕ್ಕು
ಆರಿಸಿ ಬಂದ ಮಹಿಳೆಯರಲ್ಲಿ
ಬಹುಪಾಲು ಸದಸ್ಯೆಯರು
ಮೊದಲ ಬಾರಿಗೆ ಆಸನಗಳನ್ನೇರಿ ಕುಳಿತಿದ್ದಾರೆ
ಒಬ್ಬಳು ಪ್ರೆಸಿಡೆಂಟ್ ವೈಸ್ ಪ್ರೆಸೆಡೆಂಟ್
ಸ್ಥಾಯೀ ಸಮಿತಿಗಳ ಪಟ್ಟ ಕಟ್ಟಿದ್ದಾರೆ
ಇನ್ನಷ್ಟು ಮಂದಿ ಸದಸ್ಯೆಯರಿಗೆ

ಆದರೆ
ಗಂಡಸರೇ ಸರದಾರರಾಗಿ ಆಡಳಿತ
ನಡೆಸುತ್ತಿದ್ದಾರೆ ನೋಡಿ!
ಇವರು ಈ ಮಹಿಳೆಯರು
ಕಲಿತ ವಿದ್ಯೆಯೆ ಸೊನ್ನೆ
ನುರಿತ ಜಾಣ್ಮೆಯು ಇಲ್ಲ
ಗಂಡಂದಿರ / ಅಧಿಕಾರಿಗಳ
ಕೈಗೊಂಬೆಗಳಾಗಿ
ಗೋಸುಂಬೆಗಳಾಗಿ ಬಿಟ್ಟಿದ್ದಾರೆ ಇಲ್ಲಿ
ಪಂಚಾಯತಿ ರಾಜ್ಯದಲ್ಲಿ!
ಗಂಡಂದಿರ ಇಷ್ಟಾರ್ಥ ಸಾಧನೆಗೆ
ಅಧಿಕೃತ ಮೊಹರು ಹೊಡೆಯುತ್ತಾರೆ
ಇನ್ನೂ ಕೆಲವರು

ಎಡಹೆಬ್ಬೆಟ್ಟಿನ ಗುರುತಲ್ಲೆ ಇದ್ದಾರೆ
ಸಭೆಗಳಲ್ಲಿ ನಿಯಮಿತ ಸ್ಥಾನದಲ್ಲಿ
ಅಲಂಕಾರವಾಗಿ ಕುಳಿತಿರುತ್ತಾರೆ
ಆದರೆ ನಿಜವಾಗಿ
ಕಾರುಭಾರವೆಲ್ಲ ಗಂಡಸರದೆ!
ಈ ಗಂಡಸರೋ – ಗಂಡಂದಿರೋ
ಜತೆಯಲ್ಲೆ ಬರುತ್ತಾರೆ
ಹೊರುತ್ತಾರೆ ಇವರುಗಳ ಪರ್ಸ್
ಭಾರವಾಗಿದ್ದಾಗಲೆಲ್ಲ!
ಗ್ರಾಮ ಪಂಚಾಯತಿಯಲ್ಲಿ ಚರ್ಚೆ
ಮಾಡುವವರು ಮಹಿಳೆಯರೇ
ಆದರೆ ತೀರ್ಮಾನವಾಗುವುದು ಮಾತ್ರ
ಗಂಡಸರ ಅಭೀಷ್ಟದಂತೆ!
ಮಹಿಳೆ ಅಸಹಾಯಕಳು
ಅಮಾಯಕಳು, ಆಡಳಿತೆಯ
ಅನುಭವವಿಲ್ಲದವಳೆಂದು

ಚೆನ್ನಾಗಿ ಬಲ್ಲ ಈ ಗಂಡಸರು
ಚಾಣಾಕ್ಷ ಭಂಡರು
ಬಳಸುತ್ತಾರೆ ಅವಳನ್ನು ಸ್ವಲಾಭಕ್ಕೆ
ಮಹಿಳೆಯರ
ಮೀಸಲಾತಿ ಸೂತ್ರವನ್ನೇ ಆಧರಿಸಿ!

○

## ಕೆರೆ ಹೂಳಿನ ಕೂಳು

ಊರಿಗೆ ಊರೇ ನೆರೆದಿತ್ತು
ಕೆರೆ ದಂಡೆ ಬಳಿಯಲ್ಲಿ
ಇಂದು ಹೂಳೆತ್ತುವ ದಿನವೆನ್ನುತ
ಬಲು ಸಂತಸ ತಾಳಿ

ಹದಿನೇಳು ಸಾವಿರ ರೂಪಾಯಿ ಬಜೆಟ್
ಸ್ಯಾಂಕ್ಷನ್ ಆಗಿತ್ತು ಬಿ.ಡಿ.ಓ ಕಡೆಯಿಂದ
ನುರಿತ ಗುತ್ತೇದಾರ ಒಡನೆಯೇ ಎಚ್ಚತ್ತು
ಕಾರ್ಯನಿರತನಾಗಿಯೆ ಬಿಟ್ಟ ತಡವಿಲ್ಲದೆ.

ಎತ್ತೆತ್ತಿ ಬಿಸಾಕತೊಡಗಿದ
ಕೆರೆಯ ಹೂಳನ್ನೆಲ್ಲ
ಹೂಳು ತೆಗೆಸಲಿಕೆಂದು
ಮೀಸಲಾಗಿದ್ದ ಹಣದ ಕಂತೆ

ಇನ್ನೂ ಬೇಕು, ಸಾಲುವುದೆಲ್ಲಿ ಈ ಹಣ
ನೀರೊರತೆ ಬರಲಿಕೆ ಬಹಳಷ್ಟು ಹಣ ಬೇಕು
ಎಂದೊದರಿ ನಡೆದನದೊ ಊರುಬಿಟ್ಟು.

ಜನಗಳ ಕಾತರವಾಯ್ತು
ಕಾಣಿಸದ ನೀರುಪಾಲು
ಕುಡಿಯುವ ನೀರಿಗೆ ಇನ್ನು ಗತಿಯೇನು ಎಂದು

ನೆನೆದು ಆದರು ಜನರು ಕಂಗಾಲು
ಜನಗಳಿಗೆ ದನಗಳಿಗೆ ಗಿಡಮರ ಪಕ್ಷಿಗೆ
ಕುಡಿವ ನೀರನು ಎಂತು ಒದಗಿಸುವುದೆಂತು
ಮರುಗುತ್ತ ಕೊರಗಿದರು ಆಗಿ ಕಂಗಾಲು
ಸುರಿಸಿದರು ಕಣ್ಣೀರು ಧಾರೆಧಾರೆ.
ಆ ಹಳ್ಳಿಯಲ್ಲೂ ಕೂಡ
ಯುವಕರಿದ್ದರು ಹಲವು
ಜನಸೇವೆ ಎಂಬ ಹಂಬಲವ
ಮನದಲ್ಲೇ ಹೊತ್ತುಕೊಂಡವರು

ಅತ್ತಿತ್ತ ನೋಡಿದರು
ತಮ್ಮೊಳಗೇ ಕಣ್ಸನ್ನೆ ಮಾಡಿದರು
ಮರುಗಳಿಗೆಯಲ್ಲೇ
ದೊಗಲೆ ಪ್ಯಾಂಟನ್ನು ಬಿಚ್ಚಿ
ಬಿಗಿದು ಕಚ್ಚೆಯ ಕಟ್ಟಿ
ಹಾರೆ ಪಿಕ್ಕಾಸು ಗುದ್ದಲಿ
ಹಾಂಡೆ ಭಾಂಡೆಗಳ ಹಿಡಿದು
ಕೆರೆಯೊಳಗೆ ಇಳಿದು
ಬಗೆ ಬಗೆಯ ಹೂಳು ತೆಗೆದು
ದೂರಕ್ಕೆ ಒಗೆಯತೊಡಗಿದರು.

ಸುಮ್ಮನೇ ನಿಂತು ನೋಡುತ್ತ
ಕೈಕಟ್ಟಿಕೊಂಡಿದ್ದ ಜನರು
ತಾವೂ ಸೇರಿದರು ಹೂಳೆತ್ತಲು
ಗಂಡು ಹೆಣ್ಣೆನ್ನದೆಯೆ
ವೃದ್ಧ ಬಾಲಕರೆನದೆ
ಎಲ್ಲರೂ ದುಡಿದರೋ ದುಡಿದರು
ಸ್ವಯಂಪ್ರೇರಿತರಾಗಿ ಇಳಿದು
ಕೆರೆಯ ಹೂಳನ್ನೆಲ್ಲ ಎತ್ತಿ ಹಾಕಿದರು

ಇರುಳು ಕವಿಯಿತು ಎಂದು
ಮನೆಗಳಿಗೆ ತೆರಳಿದರು.

ಮುಂಜಾನೆಯೊಳಗಾಗಿ ನೀರು ತುಂಬಿತು ಕೆರೆಯ
ಕಟ್ಟೆ ಒಡೆಯುವುದೇನೋ ಎಂಬಷ್ಟು ಭರದಿ
ತನುಮನ ಅರಳಿಸಿತು, ಸಂತಸವ ಮೂಡಿಸಿತು
ಹಪಹಪಿಸಿ ಅಳುತ್ತಿದ್ದ ಜನ ಸಂದೋಹದಲ್ಲಿ
ತಮ್ಮೊಳಗೆ ಅಡಗಿರುವ
ಮಾರುತಿಯ ಶಕ್ತಿಯನು
ಕಂಡುಕೊಂಡರು ಜನರು
ಕೊಂಡಾಡಿದರು ಯುವಕರನು

ಇನ್ನೇತಕೆ ನಮಗೆ ಸರಕಾರದ ನೆರವು
ಗುತ್ತಿಗೆಯ ಬರವು ಬಲು ಭಾರವು
ನಮ್ಮ ಸಾಮರ್ಥ್ಯದಿಂದಲೆ
ಬಾಳಿ ಬದುಕೋಣ ಎಂದು
ತೀರ್ಮಾನ ಮಾಡಿದರು ಅಂದೇ, ಅಲ್ಲೇ

ಆ ಗುತ್ತೇದಾರನಿದ್ದಾನಲ್ಲ
ಅವನೊಬ್ಬ ದಗಾಖೋರ, ಲಾಭಬಡುಕ
ಸಮಯಸಾಧಕ, ಮಹಾಘಟಿಂಗ
ಮೇಲಾಫೀಸರ ಬಳಿಗೋಡಿ
ಹೂಳೆತ್ತಿ ಆಗಿದೆ ಸಾರ್
ತಗೊಳ್ಳಿ ನಿಮ್ಮ ಪಾಲಿನ ಮುಂಗಡ
ನೀರೊರತೆ ಬರಿಸಲು ಎಂದು
ಇನ್ನೊಂದು ಬಿಲ್ ಪಾಸುಮಾಡಿರಿ ಸಾರ್
ಜನಸೇವೆ ಮಾಡೋಣ ನಾವು ನೀವು ಸೇರಿ
ಗುಟ್ಟಾಗಿರಲಿ ಎಂದು ಕಣ್ಣು ಮಿಟುಕಿಸಿದ.

# ಚಂದಮಾಮ ಓ ಚೆಂದಮಾಮ

ಬಾಲ್ಯ ಕಾಲದಿಂದಲು ನಾನು–
ನನ್ನಂತೆಯೇ ಲೆಕ್ಕವಿಲ್ಲದಷ್ಟು
ಮುದ್ದುಮಕ್ಕಳ
ಕುಣಿಸಿ ತಣಿಸಿ ನಲಿಸಿ ಉಳಿಸಿ ರಮಿಸಿ
ಹರ್ಷಧಾರೆಯನ್ನು ಸುರಿಸುವಂತೆ
ಮಾಡಿದಂಥ ನೀನು
ಚಂದಮಾಮನೇ ನಿಜದಿ ಚೆಂದಮಾಮನೇ
ಎಂಬ ಭರವಸೆಯ ಭಾವವನ್ನು
ನಮ್ಮ ಪುಟ್ಟ ಎದೆಗಳಲ್ಲಿ ಎಬ್ಬಿಸಿ
ಆಟವಾಡಿ ಮಾಟಮಾಡಿ
ಮರೆಯದಂತೆ ಉಳಿದುಕೊಂಡ
ಚಂದಮಾಮಾ ಓ ನನ್ನ ಚೆಂದಮಾಮ.

ಚಂದಮಾಮನೆಂದು ಕರೆದ ಮಕ್ಕಳಲ್ಲೆ ಕೆಲವರು
ಹಾರಿ ಹೋಗಿ ಚಂದ್ರಗ್ರಹವ ಕೆದಕಿ ಬಂದರು
ಶಶಿಯ ನಡುವೆ ಕಂಡುದೆಲ್ಲ ಕಂದಕವೇ ಎಂದರು
ತದಕಿ ಕೆದಕಿ ತಂದುದೆಲ್ಲ
ಕಲ್ಲು ಮಣ್ಣು ಎಂದರು
ಚಂದ್ರಲೋಕದಲ್ಲಿ ಬದುಕುವಂಥ
ಸುಳಿವೆ ಇಲ್ಲವೆಂದರು!
ಧೂಳಿರಾಶಿ ಕಲ್ಲುಬಂಡೆ
ಸಹಿಸದಂಥ ತಾಪವು
ಒಕ್ಕಲಿಲ್ಲ, ಮಕ್ಕಳಿಲ್ಲ
ಮುದ್ದು ಮೊಲದ ಸುಳಿವೆ ಇಲ್ಲ
ಸೂರ್ಯನಿಂದ ಎರವು ತಂದ
ಬೆಳಕು ಅಲ್ಲಿ ಎಂದರು

ಬೀಳು ಬಿದ್ದ ಗೋಳು ಸುರಿವ
ಗೋಲ ಚಂದ್ರಗ್ರಹ ಎಂದರು.

ಅಲ್ಲಿ ಹೋಗಿ ನೋಡಿ ಬಂದ ಜನಗಳೋ
ಜ್ಞಾನಿ ವಿಜ್ಞಾನಿಗಳು
ಸಂಶೋಧಕರು, ಸಂಗ್ರಾಹಕರು
ಶಾಸ್ತ್ರವೇತ್ತರು, ಸನ್ಮಾನ ಪಾತ್ರರು
ಚಂದ್ರಲೋಕವೆಂಬುದೊಂದು
ಬಂಜೆ ಉಪಗ್ರಹವೆಂದು

ಚಂದಮಾಮನೆಂಬ ಹೆಸರ ಅಳಿಸಿ
ಅಯ್ಯೋ ಚೆಂದಮಾಮ
ನಿನ್ನನವರು ಕೊಂದರು!

ಚಂದಮಾಮ ನೋಡೆ ಅಲ್ಲಿ
ಎಂದು ಹಾಡಿ ನಲಿದಂಥ
ಅಮ್ಮನೀಗ ಸುಮ್ಮನಾಗಿಬಿಟ್ಟಳು
ರಾಗವಾಗಿ ಹಾಡುತಿದ್ದ
ಸೊಲ್ಲುಗಳನು ಮರೆತಳು
ಚಂದ್ರಗ್ರಹಣ ಎಂದು ಇರುಳ
ಊಟವನ್ನೆ ನಿಲ್ಲಿಸಿ
ಹಾಲು ಹಣ್ಣು ಅಜ್ಜಿ ಕೊಡುತಲಿದ್ದಳು
ಯಾವುದೋ ಮಂತ್ರವನ್ನು
ಮನಸಿನಲ್ಲೆ ಪಠಣಮಾಡಿ
ಅಜ್ಜಿ ಮೌನವಾಗುತ್ತಿದ್ದರು
ಎಲ್ಲದಕ್ಕು ಅಪ್ಪ ಸುಮ್ಮಗಿದ್ದರು
ಗ್ರಹಣ ಹಿಡಿದ ಸಮಯದಲ್ಲಿ
ಶಂಖವೂ ಜಾಗಟೆ ಬಡಿದು
ರಾಹು ಕೇತು ತಗ್ಗಲಿ
ಚಂದ್ರನ ಬಲ ಹಿಗ್ಗಲಿ
ಎಂದು ಕಂಠ ಬಿರಿಯುವಂತೆ

ಆರ್ಭಟಿಸಿ ಚಂದ್ರನಿಗೆ
ಧ್ವನಿಯ ಬಲವ ನೀಡುತ್ತಿದ್ದ
ದಿನವನೆಂತು ಮರೆಯಲಿ?
ನಡುಗು ಚಳಿಯ ಇರುಳಿನಲ್ಲೂ
ಕೆರೆಯ ನೀರಲಿಳಿದು ಮುಳುಗಿ
ಬರುತಲಿದ್ದ ನೆನಪಿನೆಂತು ಮರೆಯಲಿ?

ಏನೇ ಆಗಲಿ, ಹೇಗೆ ಇರಲಿ ಓ ಚಂದಮಾಮ
ನೀನು ನನಗೆ ಚೆಂದವೇ
ಬಾನಿನಲ್ಲಿ ಬಟ್ಟಲಂತೆ
ಮೂಡಿದಾಗಲೆಲ್ಲ
ನನಗೆ ಮಹದಾನಂದವೇ
ನಿನ್ನನಲ್ಲಿ ಬಾನಿನಲ್ಲಿ
ತಂದುಕಟ್ಟಿ ಮೇಲಕೆತ್ತಿ
ಹಿಡಿದು ನಿಂತರೆಂತೋ ಚೋದ್ಯವೆ!
ಹಗ್ಗವಿಲ್ಲ, ಗೂಟವಿಲ್ಲ
ಅಲ್ಲಿ ನಿಂತೆ ಹೇಗೆ ಎಂಬ
ನಿಗೂಢವನ್ನು ಮರೆಯಲೊಲ್ಲೆ
ಅಳುತಲಿದ್ದ ರಾಮಚಂದ್ರಗೂ
ತಾಯಿ ಕೌಸಲ್ಯೆ ನಿನ್ನ ತೋರಿಸುತ್ತ
ನಗುವ ಹಾಗೆ ಮಾಡಿದಂಥ
ನಿನ್ನ ತಂತ್ರ ಮಂತ್ರವನ್ನು
ನಾನು ಹೇಗೆ ಮರೆಯಲಿ?
ಡೊಳ್ಳು ಹೊಟ್ಟೆ ಗಣಪನನ್ನು ನೋಡಿ
ಚೌತಿ ಚಂದ್ರ ನಕ್ಕುದಕ್ಕೆ
ಶಿಕ್ಷೆ ಪಡೆದನೆಂಬ ಕಥೆಯು
ಇನ್ನೂ ನನ್ನ ನೆನಪಲುಳಿದಿದೆ!

ಆದರೀಗ ಈ ಜನಗಳು
ನಿನ್ನ ಜನ್ಮ ಕುಂಡಲಿಯನ್ನು
ತಿದ್ದಿ ಬರೆವರೇನೋ ತಿಳಿಯದು

ಏನು ಆದರೂ ಚಂದಮಾಮ
ನೀನು ನನಗೆ ನಿತ್ಯ ಚೆಂದ
ಬಾನಿನಲ್ಲಿ ಬೆಳಗುತಿರಲಿ
ಕುಣಿದು ಕುಣಿದು ನಕ್ಕು ನಗುವ
ಬಾಲೆಯಾಗುತಿರುವೆ ಇಂದಿಗೂ
ಚಂದಮಾಮ ಓ ನನ್ನ ಚೆಂದಮಾಮಾ.

# ನಮ್ಮ ದೇಶ ಭಾರತ

ನಮ್ಮ ದೇಶ ಭಾರತ; ರಾಜಧಾನಿ ದೆಲ್ಲಿ
ಎಲ್ಲಿ? ಎಲ್ಲಿ ಅದೆಲ್ಲಿ, ಆ ದೆಲ್ಲಿ?

ನಮ್ಮ ದೇಶದ ವರಿಷ್ಠರು
ಮಂತ್ರಿ ಮಹೋದಯರು
ರಾಷ್ಟ್ರಪತಿ ಪತ್ನಿಯ ಸಹಿತ
ಎಂ.ಪಿ.ಗಳು, ಜಂಪಿಗಳು
ಎಕ್ಸ್ ವೈ ಜೆಡ್ ಕ್ಲಾಸಿನವರು
ಹಿರಿಯ ಅಧಿಕಾರಿಗಳು
ರಾಜಕಾರಣಿಗಳು, ಭೂಪತಿಗಳು
ಅಲ್ಲಿಯೇ, ಆ ದಿಲ್ಲಿಯಲ್ಲಿಯೆ
ಬದುಕುತ್ತಾರೆ.
ಅಂಗರಕ್ಷಕರ ಭದ್ರಕೋಟೆಯಲ್ಲಿ
ಮಲಗಿ ನಿದ್ರಿಸುತ್ತಿದ್ದಾರೆ
ಗೊರಕೆ ಸದ್ದು ಸಹ ಕೇಳಿಸುತ್ತಿದೆ!
ಹೊರಗಿನ ಗದ್ದಲಗಳು
ಒಳಗಿನ ಗೊಂದಲಗಳು
ಭೀಕರ ಆಗುಹೋಗುಗಳು

ಇಷ್ಟಿಷ್ಟು ಒಳಗೆ ತೂರದಂತೆ
ತಮ್ಮ ಐಷಾರಾಮಕ್ಕೆ ಅಡ್ಡಿಯಾಗದಂತೆ
ಭದ್ರಪಡಿಸಿಕೊಂಡಿರುವ
ಕೋಟೆಯಲ್ಲೆ ನಮ್ಮ ಪ್ರಭುವರ್ಯರು
ಹಾಯಾಗಿ ಪವಡಿಸಿದ್ದಾರೆ
ಆಗೊಮ್ಮೆ ಈಗೊಮ್ಮೆ ಪಗಡೆಯಾಡುತ್ತಾರೆ ಅಷ್ಟೆ!

ಅಲ್ಲಿ ಎಂದರೆ ಆ ದಿಲ್ಲಿಯಲ್ಲಿ
ಅಗ್ಗದ ಬೆಲೆಗೆ ದೊರಕುತ್ತಿದೆ
ಬಟ್ಟೆ ಬರೆ, ದೇಶವಿದೇಶಗಳ
ಮದ್ಯ, ಖಾದ್ಯ, ನೈವೇದ್ಯ

ಸುಖವಿಲಾಸದ ಸಕಲ ಸಾಧನಗಳು
ಪಂಚತಾರಾ ಭವನಗಳೂ
ಮನರಂಜನೆಯ ಸರಂಜಾಮುಗಳು
ಭೋಗ ಭಾಗ್ಯದ ಬದುಕಿಗೆ
ಇದಕ್ಕಿಂತ ಮಿಕ್ಕಿರುವ ಬೇರೊಂದು ತಾಣ
ಬೇಕಾಗಿಲ್ಲ ಹೇಳಿ!

ಹಾಗೆಯೇ ಅಲ್ಲಿ, ಆ ದಿಲ್ಲಿಯಲ್ಲಿ
ಮದ್ದುಗುಂಡುಗಳು
ಏ.ಕೆ. ರೈಫಲ್ಲುಗಳು
ಕತ್ತಿ ಚೂರಿ ಬಾಂಬುಗಳು
ಎಲ್ಲವೂ ಸಿಗುತ್ತವೆ ಅಗ್ಗದಲ್ಲಿ
ಹಿಂದುಗಳು, ಮುಸಲ್ಮಾನರು,
ಸಿಕ್ಕರು, ಪಂಜಾಬಿಗಳು,
ಕ್ರೈಸ್ತ, ಜೈನ, ಬೌದ್ಧರು
ಎಲ್ಲರೂ ಬಾಳುತ್ತಿದ್ದಾರೆ ಅಲ್ಲಿ
ಆದರೆ ನೋಡಿ ಅಲ್ಲಿ, ಎಂದರೆ ಆ ದಿಲ್ಲಿಯಲ್ಲಿ

ಸಧವೆಯರಿಗಿಂತ
ವಿಧವೆಯರ ಸಂಖ್ಯೆಯೇ ಹೆಚ್ಚು
ಆಗಾಗ ನಡೆಯುತ್ತಿರುವ
ಗುಂಪು ಘರ್ಷಣೆಯಲ್ಲಿ
ಜಾತಿ ದಂಗೆಗಳಲ್ಲಿ
ಬಂದ್, ಸ್ಟ್ರೈಕ್, ರ್‍ಯಾಲಿಗಳಲ್ಲಿ
ಲಾಠಿ ಚಾರ್ಜ್ ಗೋಲಿಬಾರ್‌ಗಳಲ್ಲಿ
ಮಾಯವಾಗಿದ್ದಾರೆ ಮತ್ತು
ಮಾಯವಾಗುತ್ತಲೇ ಇದ್ದಾರೆ
ಅವರ ಗಂಡಂದಿರು
ಅಳಿಯಂದಿರು, ಮಕ್ಕಳು ಸಹ!
ಮಾಡಿಲ್ಲದ ಮನೆಯಲ್ಲಿ
ಜೋಡು ಚಪ್ಪರ ಹಾಕಿ
ಬಿರುದು ಬಾವಲಿಗಳನ್ನು
ನೇತು ಹಾಕಿ
ಮಡಿದವರ ಪರಾಕ್ರಮವ
ಸಾರುತ್ತಾರೆ ಅಳುವನ್ನು ನುಂಗಿ ನುಂಗಿ
ಮಕ್ಕಳು ಹಸಿವೆಯಿಂದ
ಅಳುತ್ತವೆ, ನರಳುತ್ತವೆ
ರೋಗರುಜಿನಗಳಿಂದ ಬಳಲುತ್ತವೆ
ನಿತ್ರಾಣಿಗಳಾಗಿಯೇ
ಸಾಲೆ ಓದುತ್ತಾರೆ,
ಡ್ರಗ್ ಸೇವಿಸುತ್ತಾರೆ
ಹಗೆತನದ ನಂಜಿನಲ್ಲೇ ಬೆಳೆಯುತ್ತಾರೆ
ಮೈ ಮನ ತುಂಬ ವಿಷ ತುಂಬಿಕೊಂಡೇ
ಬದುಕುತ್ತಾರೆ
ವಿಷಕಂಠನಿಗೆ ಸವಾಲಿನಂತೆ!

ಆಮೇಲೆ, ಪಂಜಾಬ್ ಗೊತ್ತಲ್ಲವೇ ನಿಮಗೆ?

ಪಂಚನದಿಗಳ ಸೀಮೆ
ಹಾಗಂತ ಇತಿಹಾಸ, ಭೂಗೋಳ
ಪಠ್ಯಪುಸ್ತಕಗಳಲಿ ಓದಿದ್ದೀರಲ್ಲ?
ಹಸಿರು ಕ್ರಾಂತಿಯ ಹೆಸರು ಹೊತ್ತ
ಪ್ರಾಂತ್ಯ ಅದು ಆ ಪಂಜಾಬ್
ಆದರೀಗ
ಆ ನದಿಗಳಿ ಹರಿಯುವ ಸ್ವಚ್ಚ ನೀರು
ಬತ್ತಿ ಹೋಗಿದೆ
ಕಂಡ ಕಂಡಲ್ಲಿ ಸಿಕ್ಕಿ ಸಿಕ್ಕಿದವರ
ಕೊಂದಿಕ್ಕಿ ಬಂದು
ಕತ್ತಿಗಳ ತೊಳೆದ ಕೆಂಪು ನೀರು
ಅಲ್ಲಿ, ಆ ನದಿಗಳಲ್ಲಿ ಹರಿಯುತ್ತಿದೆ
ಅಮಾಯಕ ಮಹಿಳೆಯರ
ಮುಗ್ಧ ಮಕ್ಕಳ ದುಃಖ ಬೆರೆತಿರುವ
ಕೆಂಪುನೀರು!
ಅಷ್ಟೇ ಅಲ್ಲ
ನಿತ್ಯವೂ ಜೀವಭಯದಿಂದ
ಬದುಕುವ ಜನಗಳ
ಉಸಿರಿಂದ ಬಿಸಿಯಾಗಿದೆ
ಆ ನದಿಗಳ ಕೆಂಪು ನೀರು.
ಗುಂಡೇಟುಗಳ ಸದ್ದಾಲಿಸಲು
ಸಿದ್ಧರಾಗಿ ಕಂಪಿಸುತ್ತಾರೆ
ಪ್ರತಿಕ್ಷಣವೂ ಅವರು.
ಮುಂದೆ?

ಬಂಗಾರ ಮಂದಿರದ ಮೇಲಿನ ದಾಳಿ
ಓದಿದ್ದೀರಲ್ಲ ಬಿಸಿ ಬಿಸಿ ಸುದ್ದಿ ಪೇಪರಿನಲ್ಲಿ
ಹಲವು ವರ್ಷಗಳೇ ಕಳೆದರೂ
ಅದನ್ನು ಮರೆಯಲಾದೀತೆ?

ಅದು ಒಂದು ಪವಿತ್ರ ದೇವಾಲಯ
ಗ್ರಂಥ ಸಾಹೇಬಕ್ಕೆ ನಿತ್ಯಪೂಜೆಯು ಅಲ್ಲಿ
ಲಂಗರಿನಲ್ಲಿ ಉಚಿತ ಪ್ರಸಾದ ವಿನಿಯೋಗ
ಬಹುಕಾಲದಿಂದಲೂ ನಡದು ಬಂದ
ರೀತಿ ರಿವಾಜು ಇದು
ಈಗಲೋ ತಲೆಕೆಳಗಾಗಿ
ಕಾಲಿಸ್ಥಾನಕ್ಕಾಗಿ ಗುದ್ದಾಟ ನಡೆದು
ನೂರಾರು ರುಂಡಗಳು ಉರುಳಿದಾಗ
ಇದು ಖಲಿಸ್ಥಾನವಾಗದೇ
ಕಬರಸ್ಥಾನವಾಯಿತು.
ಪವಿತ್ರ ದೇವಾಲಯ ಮಲಿನವಾಯಿತು
ಗುಂಡೇಟಿನ ಸದ್ದಿಗೆ
ಜನರ ಕಿವಿ ಕಿವುಡಾಯಿತು
ಸಾವು ನೋವನು ನೋಡಿ
ಎದೆ ಎದೆ ಬಡಿದುಕೊಂಡಾಯಿತು
ಆದರೂ ಜನಗಳು ಬದುಕಿದ್ದಾರೆ
ಬಾಳಲೆಂದಲ್ಲ,
ಇನ್ನೂ ಜೀವ ಹೋಗಿಲ್ಲ ಎಂದು!

ಮತ್ತೆ, ಕಲಕತ್ತಾ
ಅಲ್ಲಿ ಕಾಳಿಯೇ ಕುಲದೇವತೆ
ನರ ರುಂಡವೇ ಉಡಿಗೆ ತೊಡಿಗೆ
ಆಭರಣ, ನಿತ್ಯ ನೈವೇದ್ಯ
ಅದಕ್ಕಾಗಿಯೇ ಜನರುಗಳ
ರುಂಡ ಮುಂಡವನು ಬೇರ್ಪಡಿಸಿ
ಕಾಳಿಕಾಮಾತೆಗೆ ಅರ್ಪಿಸುತ್ತಾರೆ
ಅದರಿಂದಲೇ ಪುನೀತರಾಗುತ್ತಿದ್ದಾರೆ
ಪ್ರಗತಿಪರ ಪ್ರಜಾತಂತ್ರ
ಜಾತ್ಯಾತೀತ ತತ್ವನಿಷ್ಠೆಯ

ಇಷ್ಟಮಂತ್ರವ ಘೋಷಿಸಿಯೇ
ಹಿಂಸಾಕಾಂಡವನು ಮುನ್ನಡೆಸುತ್ತಿದ್ದಾರೆ.

ಕಾಶ್ಮೀರವನು ನೋಡುತ್ತೀರಾ?
ರಾಷ್ಟ್ರದ ಮುಕುಟಮಣಿ ಕಾಶ್ಮೀರ
ನಿಸರ್ಗ ದೇವತೆಯ ತವರು
ದೋಣಿ ಮನೆಯ ವಿಹಾರ ವಿಲಾಸ
ಹಸಿರುಸಿರು ಸಾಮರಸ್ಯದ ಲಾಸ್ಯ
ಹಿತವಾದ ಹಿಮಪಾತ, ಶಾಂತಿಧಾಮ
ಆದರೆ ಅದೀಗ
ಬಂಡುಕೋರರ ತಾಣ
ಬಾಂಬುಗಳ ಸ್ಫೋಟ
ಗುಂಡುಗಳ ಗುಡುಗಾಟ, ಹಿಂಸಾಚಾರ
ಸಹಸ್ರ, ಸಹಸ್ರ ಸಾವು
ನರಳದ, ನೋವಿಲ್ಲದ ಮನೆಯೇ ಇಲ್ಲ!
ತಮ್ಮ ನೆಲೆಯಲ್ಲಿಯೇ
ಪರದೇಶಿಗಳಾಗಿದ್ದಾರೆ ಆ ಪಂಡಿತರು
ಅಶಾಂತಿಯ ಬುಗಿಲ ಬಾಗಿಲ ತೆರೆದು
ಆಹ್ವಾನಿಸುತ್ತಿದೆ ನರಕಯಾತನೆಯ.

ಇನ್ನು ದಕ್ಷಿಣಕ್ಕೆ ಒಂದಿಷ್ಟು ಪ್ರದಕ್ಷಿಣೆ ಹಾಕೋಣವೇ?
ರಾಮಾಯಣದ ಕಾಲದಲ್ಲಿ
ರಾವಣ ಸೀತೆಯನು ಕದ್ದೊಯ್ದು
ಶ್ರೀರಾಮಚಂದ್ರ ರಾವಣನ ಕೊಂದು
ಯುದ್ಧದಲ್ಲಿ ಗೆದ್ದು
ಸೀತೆಯನು ಮರಳಿತಂದ
ಎಂಬ ಕತೆಯನು ಓದಿ
ಹರಿಕತೆಯ ಕೇಳಿ
ನೆಮ್ಮದಿಯ ಉಸಿರು ಬಿಡುತ್ತಿದ್ದೆವು

ಬಾಲ್ಯದ ದಿನಗಳಲಿ, ಅಲ್ಲವೇ?
ಆಟಬಯಲಾಟಗಳಲ್ಲಿ ನೋಡಿ
ಕುಣಿಯುತ್ತಿದ್ದೆವು ನಾವೂ ಜೋಡಿ!
ಆದರೆ ಈಗ
ದಕ್ಷಿಣ ಭಾರತದಲ್ಲಿ ರಾವಣರ ದಂಡೇ ಇದೆ;
ಮಾಯಾರಾವಣರು ಜಾಲವ ಹರಡಿ
ಸರಣಿ ಬಾಂಬುಗಳ ಸಿಡಿಸುತ್ತಾರೆ
ಮನುಷ್ಯ ಬಾಂಬುಗಳನ್ನೇ ಸ್ಫೋಟಿಸುತ್ತಾರೆ
ಹೆಸರಿಡದ ಯುದ್ಧ
ನಡೆದೇ ನಡೆದಿದೆ ಇಲ್ಲಿ
ಸಾವಿರಾರು ನಿರಪರಾಧಿಗಳು
ಸಾವನಪ್ಪಿದ್ದಾರೆ;
ಅಂಗವಿಕಲರಾಗಿದ್ದಾರೆ
ಜಾತಿಮತ ಬೇಧಗಳ ದಳ್ಳುರಿ
ನಂದುವುದೇ ಇಲ್ಲ
ಅಂಜಿಕೊಂಡೇ ಬದುಕುವ
ಸಂದಿಗ್ಧ ಅವಸ್ಥೆ ಇಲ್ಲಿ!

ಮಧ್ಯ ಭಾರತದ, ಸರಹದ್ದುಸೀಮೆಗಳ ಕತೆಯೋ!
ಮಹಿಳೆಯರ ಮಾನಭಂಗ
ಹಾಲುಹಸುಳೆಯ ಮೇಲೂ ಅತ್ಯಾಚಾರ
ಕಿಡ್ನಾಪ್, ಹೋಲ್ಡಪ್, ರೇಪ್, ಲೂಟ್
ನಿತ್ಯವೂ ನಡೆಯುತ್ತಿವೆ ಇಲ್ಲಿ.
ಸೇವಾವ್ರತಿಗಳನ್ನೇ ಗುಂಡಿಕ್ಕಿ ಕೊಲ್ಲುತ್ತಾರೆ
ಜೀವಸಹಿತ ಸುಡುತ್ತಾರೆ
ಪೂಜಾಮಂದಿರವನುರುಳಿಸುತ್ತಾರೆ
ನವವಧುಗಳ ಮೇಲೆ ಸೀಮೆಎಣ್ಣೆ ಸುರುವಿ
ಬೆಂಕಿಹಚ್ಚುತ್ತಾರೆ ಆಕೆತಂದ ವರದಕ್ಷಿಣೆ
ಸಾಕಾಗಲಿಲ್ಲವೆಂದು

ಆ ಪಿಶಾಚಿಗಳ ಆಸೆಗೆ ಕೊನೆಯೇ ಇಲ್ಲ!
ಇಷ್ಟೇ ಅಲ್ಲ
ಸ್ವಯಂ ಘೋಷಿತ ಕಪಿಸೇನೆಗಳ
ಪೀಕಲಾಟ ತಾಕಲಾಟ
ಕುರಿಗಳೂ ನಾಚುವಂತೆ
ನರ ರುಂಡಗಳ ತರಿಯುತ್ತಾರೆ
ಕೊರಳ ಸಿಗಿದು, ಎದೆಯ ಬಗಿದು
ರಕ್ತಸಿಕ್ತ ಕೈಗಳಿಂದ
ಜೈ ಘೋಷ ಬರೆಯುತ್ತಾರೆ ಗೋಡೆಯ ಮೇಲೆ!
ಪಟ್ಟಣ ಸೂರೆಯಾದ ಮೇಲೆ
ಸಿಟ್ಟಿಗೆಚ್ಚರವಾದಂತೆ ಸಿ.ಬಿ.ಐ.ಡಿ.ಬಿ.ಪಿ, ಎಕ್ಸ್.ವೈ
ತನಿಖೆಗಳನ್ನೇರ್ಪಡಿಸುತ್ತಾರೆ.
ಸತ್ತವರ ಮನೆಗಳಲಿ
ಅಳುವುದಕ್ಕೂ ತೋಚದ
ಶೋಚನೀಯಾವಸ್ಥೆ
ಶಾಂತಿ ಭದ್ರತೆಯ ವ್ಯವಸ್ಥೆ!

ಉತ್ತರ ದಕ್ಷಿಣ ಪಶ್ಚಿಮ ಪೂರ್ವ
ಎನ್ನುವ ಭೇಧವು ಇಲ್ಲದಲೆ
ಹಿಂಸಾಚಾರಕೆ ಹತ್ಯಾಕಾಂಡಕೆ
ರಾಜಕಾರಣಿಗಳ ಗೋಸುಂಬೆಯಾಟಕೆ
ಹಣವಂತರ ಬಲವಂತರ
ಧೃತರಾಷ್ಟ್ರ ಆಲಿಂಗನಕೆ ಸಿಕ್ಕಿ
ನರಳುವುದೆಲ್ಲ ಬಡಜನರೆಂದರೆ
ಅಚ್ಚರಿಯೇನಿದೆ ಅದರಲ್ಲಿ?
ನಮ್ಮನ್ನು ಮರೆತು ತಮ್ಮನು ಮಾತ್ರ
ಬದುಕಿಸಿಕೊಳ್ಳುವ ಪುಡಾರಿಗಳಿವರೆಂಬುದ
ಅರಿತೂ ಅರಿತೂ ಓಟಿನ ಹೊತ್ತಿಗೆ ನೆನಪಿಸಿಕೊಳ್ಳದೆ
ಬಲವಂತದಲವರನು ಕ್ಷಮಿಸುತ್ತಿರುವ

ದಯಾವಂತರು ನಮ್ಮ ದೇಶ ಬಡಜನರು!
ತಮ್ಮಯ ಕೊರಳಿಗೆ ತಾವೇ ಉರುಳನು
ಬಿಗಿಯುತ್ತಲೆ ಬದುಕನು ಸಾಗಿಪರು!

ಆದರೂ ಇಲ್ಲಿ, ಈ ದೇಶದಲಿ
ಇಂದಿಗೂ ಇದ್ದಾರೆ ಅಲ್ಲಲ್ಲಿ ಇಷಿಷ್ಟು
ಬೆರಳೆಣಿಕೆಗೂ ಸಿಗದಷ್ಟು ಕಿರುಸಂಖ್ಯೆಯ
ಅಣುವ್ರತ ಪ್ರತಿಪಾದಕರು
ಹಸಿರನ್ನೆ ಉಸಿರಾಡುವವರು
ಪ್ರಾಣದಯಾಸಂಘಗಳ
ಅಕ್ಷರದ ಬೆಳಕಿನ ವಿಜ್ಞಾನದ ಬಾವುಟಹಿಡಿದು
ಬಲುದೂರ ಸಾಗಲೆಳಸುವವರು.....ರು......ರು
ಮಾನವತವಾದಿಗಳು; ವಿಕಾಸಶೀಲರು.
ಎಂತಲೇ
ಇಂದಲ್ಲ ನಾಳೆ, ಆತ್ಮ ಎಚ್ಚರಗೊಂಡು
ಸಾಮರಸ್ಯದಿ ನವಜೀವನದ
ಹೊಸಬದುಕ ಸಾಗಿಸಲುಂಟು ನಾವೆಲ್ಲರೂ
ಸಂದೇಹವೇ ಇಲ್ಲ – ನಾನು ಆಶಾವಾದಿ.
ಭಾಠತ್ ಧೇಶ್ ಮಹಾನ್.



# ಹೊಸ ಕನಸು ಬೇಕು

ಹೊಸ ಕನಸುಗಳೆ
ಓಡೋಡಿ ಬನ್ನಿ
ನನ್ನ ತನುಮನವ
ಬಿಗಿದಪ್ಪಿಕೊಳ್ಳಿ!
ಹಳೆಯ ಕನಸುಗಳೆಲ್ಲಾ
ಹಳಸಿ ಹೋದುವು ಎಂದೋ
ಚಿಗುರಿ ಕೊಂಡರೂ
ಹೂವ ಬಿಡಲಿಲ್ಲ ಮುಂದು
ಕೆಲವಕ್ಕೆ ನೀರಿಲ್ಲ
ಹಲವಕ್ಕೆ ಫಲವಿಲ್ಲ
ನಿಂತಲ್ಲೇ ನಿಂತು
ಕಲ್ಲಾಗಿ ಹೋದವು ಬಾಳಿನಲ್ಲಿ
ಕನಸಿಲ್ಲದ ಬಾಳು
ಬರೆಸಪ್ಪೆ ಒಪ್ಪಲಾರದ್ದು
ಕನಸಿನಲಿ ಕಂಡಿರುವ
ತಿನಿಸುಗಳನೆಲ್ಲಾ ಚಪ್ಪರಿಸಬೇಕು
ಅದಕೆ ಕನಸುಗಳೆ
ಓಡೋಡಿ ಬನ್ನಿ
ಹೊಸ ಆಸೆ ಚಿಗುರುಗಳ
ಬಾಳಿನಲಿ ತನ್ನಿ ತನ್ನಿ
ವರುಷ ವರುಷಗಳು
ಕಳೆದು ಹೋಗಲಿ ಮುಂದೆ
ಯುಗ ಯುಗಗಳೇ ಆಗಲಿ
ಕನಸು ಬೇಕೇ ಬೇಕು ಈ ಬಾಳಿನಲ್ಲಿ

# ಮುನಿದ ನಲ್ಲೆಗೆ

ನನ್ನಲ್ಲಿ
ಅರಸ ಬೇಡನಲ್ಲೆ
ನೂರಾರು ಪತ್ರಗಳನು
ನಿನಗಾಗಿ ಬರೆದು
ಹರಿದು ಹಾಕಿದ್ದೇನೆ
ನನ್ನೆದೆಯ ತಳಮಳವ
ಅವುಗಳಲಿ ಮೂಡಿಸಿದ್ದೇನೆ
ನಿನ್ನ ಕಣ್ಣುಗಳ ಚೆಲುವ
ಬಣ್ಣಿಸಿ ಬರೆದಿದ್ದೆ
ನಿನ್ನ ಮುಂಗುರುಳುಗಳು
ಕರಿದುಂಬಿ ಎಂದಿದ್ದೆ
ನಿನ್ನ ಕುಳೀ ಕೆನ್ನೆಗೆ
ನೂರೊಂದು ಮುತ್ತುಗಳು
ನಿನ್ನ ಬಳುಕುವ ದೇಹ
ಬಲು ಚಂದ ಎಂದಿದ್ದೆ
ನಿನ್ನ ಬರುವಿಕೆಗಾಗಿ
ಕಾತರದಿ ಕಾದಿದ್ದೆ
ದಿನದಿನವೂ ಹೊಸಕನಸ
ಹೆಣೆಯುತ್ತಲಿದ್ದೆ
ನೂರೆಂಟು ಪತ್ರಗಳ
ಗಾಳಿಯಲಿ ತೂರಿದ್ದೆ
ಮನದನ್ನೆ ನಿನಗಿನ್ನೇನು

ತಿಳಿಸಲೆ ನಾನು
ಗೋಡೆಯಲಿ ಗೀಚಿದ್ದೆ
ನಿನ್ನದೇ ರೂಪ
ಮನದಾಳದಲಿ ಚಿತ್ರಿಸಿದೆ
ನಿನ್ನತದ್ರೂಪ
ಸುಡುತಿರುವ ಬೇಸರದಿ
ಚಡಪಡಿಸುತಿರೆ ನಾನು
ಹೊಂದಾವರೆಯೆ ಬಾಬೇಗ
ಕರೆಯುತಿರುವೆ.

## ಕಾಗೆ/ಕೋಗಿಲೆ

ಕಾಗೆಯು ಗೂಡಲಿ
ಕೋಗಿಲೆ ಮರಿಗಳ
ಸಾಕುತಲಿತ್ತು ಪ್ರೇಮದಲಿ

ಕಾವನು ಕೊಟ್ಟು
ಗುಟುಕನು ನೀಡಿ
ಪೋಷಿಸುತಲಿತ್ತು ಪ್ರೇಮದಲಿ

ಮರಿಗಳು ಬಡಿದವು
ರೆಕ್ಕೆ ಬಡಿದವು
ಕಪ್ಪನೆ ಬಣ್ಣದಿ ಮಿಂಚಸಿದುವು

‘ಕಾಕಾ’ ಅನ್ನುವ ಧ್ವನಿಯನು
ಕಲಿಸಿತು – ಕೂಕೂ
ಎಂದುವು ರಾಗದಲ್ಲಿ

ಮೋಸವು ತಿಳಿಯಿತು
ಕಾಗೆಯು ಕಿರುಚಿತು
ಅಟ್ಟಿತು ಮರಿಗಳ ಗೂಡಿಂದ

ರೆಕ್ಕೆಯ ಬಡಿಯುತ
ಕಾಡಿಗೆ ನಡೆದವು
‘ಕೂಕೂ’ ದನಿಯಲಿ ಹಾಡುತ್ತ
ನಾಡಿನ ಜನರುಕೇಳಲು
ಬಗೆ ಬಗೆ ವರ್ಣನೆ ಮಾಡಿದರು

ಕಾಕಾ ಎನ್ನುವ ಕಾಗೆಗೆ
ಬಡಿದರು ಕೂಕೂ ರಾಗವ
ಕಲಿಯಲೆ ಎಂದು ದಬ್ಬಿದರು
ಎಂಜಲು ಕೂಳಿಗೆ
ದಿನವೂ ಮುತ್ತುವ
ಕಲಿಯಲು ಬಾರದೆ ರಾಗವನು.



# ಕುಡುಕನ ಬದುಕು

ಜಾತ್ರೆಗೆ ಹೋಗಿದ್ದೆ
ಜೋಡೆತ್ತ ಮಾರಿದ್ದೆ
ಜಾತಿ ಬಿಟ್ಟವಳ ಸಂಗಮಾಡಿದ್ದೆ
ಸಂತೆಗೆ ಹೋಗಿದ್ದೆ
ಜೂಜಾಡಿ ಹಣವ ಕಳೆದಿದ್ದೆ

ಪೇಟೆಗೆ ಹೋಗಿದ್ದೆ
ಭಾಂಡೆಯ ನೊಯ್ದಿದ್ದೆ
ಹೆಂಡ ದಂಗಡಿ ಮಾರಿದ್ದೆ

ಯಾತ್ರೆಗೆ ಹೋಗಿದ್ದೆ
ಬರಿಕೈಲಿ ಮನೆಯ ಸೇರಿದ್ದೆ
ಹೆಂಡತಿ ಕಂಡಾಗ
ಉರಿದೆದ್ದು ಹೊಡೆದಿದ್ದೆ
'ಕರಿಮಣ್ಣು' ಕಿತ್ತು ಹಾಕಿದ್ದೆ

ಮಕ್ಕಳು ಬಂದಾಗ
ಕೆಂಡವನೆ ಕಾರಿದ್ದೆ
ಬಡಬಡಿಯ ಮೂಲೆಗೆ ದಬ್ಬಿದ್ದೆ

ಒಲೆಯಲ್ಲಿ ಉರಿಯಿಲ್ಲ
ಮನದಲ್ಲಿ ಹೊಗೆಯಿತ್ತು
ಹಸು ಹೊಟ್ಟೆಯಲೆ ಮಲಗಿದೆ.



# ಮಳೆಯ ಸೊಬಗು

ಮಳೆಗಾಲದ ಮಳೆಗೆ ಎಷ್ಟು ಸೊಕ್ಕು!
ತಟಪಟದ ಹನಿಯಾಗಿ
ತಮ್ಮಟೆಯ ಬಾರಿಸಿತು
ಭೋರೆಂದು ಸುರಿವಾಗ
ಗುಡುಗು ಸಿಡಿಲುಗಳಿಂದ
ಎಲ್ಲರನೂ ಅಂಜಿಸಿತು
ನದಿಯು ಕೊಳಗಳು ತುಂಬಿ
ಬಸಿರಾಗಿ
ತುಂಬಿ ತುಳುಕಿ ಇಳೆಯ ಮೈಮೇಲೆ
ಹರಿದಾಡಿತು
ಎಲ್ಲಿ ನೋಡಿದರಲ್ಲಿ
ಅಬ್ಬಿ, ತೋಡುಗಳಬ್ಬರವು
ನೊರೆನೊರೆಯಾಗಿ ಹರಿವ ಝರಿಗಳು
ಸೊರಗಿನಂತ ಗಿಡಮರಗಳಿಗೆ
ಹನಿಯನುಣಿಸಿ ನಲಿಸಿದೆ
ಕಾಡುನಾಡಿಗೆ ಧ್ವನಿಯ ಕೊಟ್ಟು
ಇಳೆಯ ಮುನಿಸನು ತಣಿಸಿದೆ
ಮೋಡದಿಂದ ಹನಿಯ ಸುರಿಸಿ
ಬಾನು ತಾನು ದಣಿದಿದೆ
ನೆಲದ ಹಾತೆ ಮೇಲಕೇರಿ
ಬಾನಿನಲ್ಲಿ ಕುಣಿದಾಡಿಸಿದೆ
ಹಾಡುತಿರುವ ಹಕ್ಕಿಗಳೆಲ್ಲ
ಮಂಕರಾಗಿ ಕೂತಿವೆ.
ಮೇಯುತಿರುವ ಪಶುಗಳು

ದೊಡ್ಡಿಯನ್ನ ಸೇರಿವೆ
ಮಳೆಯ ಚಳಿಯ ನಡುಕದಲ್ಲಿ
ಕೆಲಸವೆಲ್ಲಾ ಕೆಟ್ಟಿದೆ.

ಆಟಪಾಠಕ್ಕೆ ಹೋಗಲಾರದೆ
ಮನೆಯ ಮಕ್ಕಳ ಗುಲ್ಲಿದೆ
ಹರಿವ ನೀರಿನ ತೊರೆಗಳಲ್ಲಿ
ಹರಿದ ಕಾಗದದ ದೋಣಿ ಸಾಗಿದೆ
ಕುಣಿದು ಕುಣಿದು ತೆರಳಿದಾಗ
ಹರುಷದ ಹೊನಲು ಹರಿದಿದೆ

ಎಲ್ಲಿ ನೋಡಿದರಲ್ಲಿ
ಕೆಸರು ಕಾಲಿನ ಗುರುತಿದೆ
ಮಳೆಯಗಾಲದ ಹಸಿರು
ಇಳೆಯ ಮೊಗದಲಿ ಕಳೆಯಿದೆ

ಇಳೆಯ ಕೊಳೆಯ ತೊಳೆಯಲೆಂದು
ಮಳೆಯು ಓಡಿಬಂದಿತು
ಬೆಳೆಯ ಕೊಟ್ಟು ಕಳೆಯತೊಟ್ಟು
ಭೂಮಿ ತಾಯಿಯ ತಣಿಸಿತು.



# ವಸಂತಾಗಮನ

ಮರದಲಿರುವ ರೆಂಬೆ ಕೊಂಬೆಗೆ
ಚಿಗುರು ಗರಿಗಳು ಮೂಡಿವೆ
ರೆಕ್ಕೆ ಬಡಿದು ಹಾರಿತಿಂದು
ಪಕ್ಷಿಯಂತೆ ಹಲುಬಿದೆ

ನುಸುಳಿ ಬಂದ ಗಾಳಿಯೊಡನೆ
ಸರಸ ಮಾತನು ಉಸುರಿದೆ
ಬಣ್ಣ ಕಳೆದು ತಣ್ಣಗಾಗಿ
ಗರಿಯು ತಾನೆ ಬಂದಿದೆ

ಪಚ್ಚೆ ಹಳಸಿ ಬಣ್ಣದಲ್ಲಿ
ಗೆರೆಗಳೇನೋ ಮೂಡಿವೆ.
ಹಸಿರು ಹಾಸನು ಹೊದ್ದುಕೊಂಡು
ಮರವು ಮುಸಕು ಹಾಕಿದೆ
ಪಕ್ಷಿಗಣಗಳು ಹಾರಿಬಂದು
ಮುಸುಕು ಸರಿಸಿ ನೋಡಿವೆ
ಅಲ್ಲಿ ಇಲ್ಲಿ ಮೊಗ್ಗು ಬಿರಿದು
ಕುಸುಮಗಳನ್ನೆ ಕುಕ್ಕಿವೆ
ಹೂವನರಸಿ ಬಂದ ತುಂಬಿ
ಮಧುವನೀಟಿ ದಣಿದಿದೆ
ಝೇಂಕಾರದ ಧ್ವನಿಗಳಲ್ಲಿ
ನಿನ್ನ ಬರವನು ತಿಳಿಸಿವೆ
ಕಾಯಿ ಹಣ್ಣು ತುಂಬಿನಿಂತ
ಮರಗಳೆಲ್ಲ ಲಜ್ಜೆಯಿಂದ ನಾಚಿವೆ
ಜೀವ ಕೋಟಿಗಳೆಲ್ಲಾ ನಿನಗೆ
ನಮನ ಹಾಡನು ಹಾಡಿವೆ.

# ಕಳೆದಿದೆ ಚೇತನ

ಎಲ್ಲಿ ಕಳೆಯಿತು ನನ್ನ ಚೇತನ
ನನ್ನ ಶಕ್ತಿಯುಕ್ತಿಯು
ಎಷ್ಟು ಹುಡುಕಿದರೂ ಕಾಣದಾಯಿತು
ಬರಿಯ ಬಾಳನು ಕೊಟ್ಟಿತು
ಎದೆಯ ತುಂಬ ಓಡುತ್ತಿತ್ತು
ಮನಕೆ ಹರುಷನ ನೀಡುತ್ತಿತ್ತು
ಕ್ಷಣ ಕ್ಷಣಕು ಕಾಡುತಿತ್ತು ನನ್ನ ಆ ಚೇತನವು
ಗಗನದೊಳಗಾಡುವ ಹಕ್ಕಿಯಂತೆ
ಚಿಗುರೊಡೆದ ಗಿಡದ ತೆರದಿ
ಗೆಲುವಿನಲಿ ನಗುತಲಿತ್ತು.
ನನ್ನ ಮನವ ತುಂಬುತ್ತಿತ್ತು.
ಹರುಷ ಧಾರೆಯನೆರೆಯಿತು
ಎಲ್ಲ ಕಾಲವು ಒಂದೆ ಅದಕೆ
ಕುಣಿಯುತಿರುವ ನವಿಲಿನಂತೆ
ಕಾಣದಾಯಿತು ಎಲ್ಲಿ ಹೋಯಿತೋ
ತನ್ನ ತಾಣವ ಬಿಟ್ಟಿತು.

○

# ಯಾರಿದ್ದೀರಿ ಒಳಗೆ

ಯಾರಿದ್ದೀರಿ ಒಳಗೆ
ಕರೆಯ ಬಂದಿದ್ದೇನೆ
ಎದ್ದು ಬನ್ನಿರಿ ಹೊರಗೆ
ಕರೆಯೋಲೆ ಕೇಳಿಸಿತು
ಮುಸುಕು ಹೊದ್ದು
ಮಲಗಿದ್ದ ನಾನು
ಚಳಿಗಾಲದಲ್ಲೂ
ದನಿಕೇಳಿ ಬೆವರು ಸುರಿಸಿದೆ
ಎಷ್ಟು ದಿನದಿಂದ
ಕಾದಿದ್ದರೋ ಸಜ್ಜಾಗಿ ಹೊರಗೆ
ಎಷ್ಟು ಬಾರಿ ಬಾಗಿಲ ಬಡಿದು
ಮರಳಿದ್ದರು ಕೂಡಾ
ಅದರೂ ಬಿಡಲಿಲ್ಲ ಅವರ ಕಾಟ
ಮರುಧ್ವನಿಗೆ ಕಿವಿಯಾಲಿಸಿ
ಕುಳಿತಿದ್ದಾರೆ, ಅದೆ ಅವರ ಚಟ

ಚಟ್ಟಕೇರಿಸಿ ನನ್ನ
ಕೊಂಡೊಯ್ಯ ಬೇಕೆಂಬುದೇ
ಅವರ ತೀರ್ಮಾನ
ಅದಕ್ಕೆ ಕರೆಯುತ್ತಾರೆ
ಆಗೊಮ್ಮೆ ಈಗೊಮ್ಮೆ
ನಾನೋ ಮಿಸುಕದೇ ಮಲಗಿದ್ದೇನೆ
ಮುಸುಕಿನೊಳಗೆ.



# ಬೇಡುತಿಹೆ ವರವ

ವಿದ್ಯೆ ಬುದ್ಧಿಯನಿತ್ತೆ
ನಿನ್ನ ಪೂಜಿಸಲೆಂದು
ಗಂಧ ಚಂದನವಿತ್ತೆ
ನಿನಗೆ ಲೇಪಿಸಲೆಂದು
ಕಂಪು ಹೂವನು ಕೊಟ್ಟೆ
ನಿನಗೆ ಅರ್ಪಿಸಲೆಂದು
ಕರ್ಪೂರವನು ಕೊಟ್ಟೆ
ನಿನಗಾರತಿ ಬೆಳಗಲೆಂದು
ದೇವಾ,
ಎಲ್ಲವನು ನೀನಾಗಿ
ನನಗೆ ಕೊಟ್ಟಿರುವೆ
ಮಂತ್ರ ಘೋಷಗಳಿಂದ
ನಿನಗೆ ನಮಿಸುವೆನು
ನಿತ್ಯವೂ ನೈವೇದ್ಯ
ನಿನಗೆ ಅರ್ಪಿಸುವೆನು
ನೀನು ಕೊಟ್ಟುದನೆಲ್ಲಾ
ನಿನಗೆ ಕೊಟ್ಟಿರುವೆ
ಏನಾದರೂ ಒಂದು ವರ
ಕೊಡಬೇಡವೆ ನೀನು
ದಿನವೂ ಹಂಬಲಿಸಿ
ಕಾದಿರುವೆ ನಾನಿಲ್ಲಿ
ನನ್ನಾಸೆಗೇನಾದರೂ
ಕೊಡಬೇಕು ನೀನು.

# ನಾನೊಂದು ಹೆಣ್ಣು

ನಾನು ನಿತ್ಯ ವಧುವೆ
ಮುಡಿಯ ತುಂಬ ಹೂವ ಮುಡಿದು
ಕೊರಳ ತುಂಬ ನಗವ ತೊಟ್ಟು
ಕೈಗಳಲ್ಲಿ ಬಳೆಯ ತೊಟ್ಟು
ಪಟ್ಟೆಸೀರೆ ಉಟ್ಟುಕೊಂಡು
ಸೆರೆಗನೆಳದು ಕಟ್ಟಿಕೊಂಡು ನಿತ್ಯ ನಡೆಯುವೆ
ನಾನು ನಿತ್ಯ ಸುಮಂಗಲೆ
ಹಣೆಗೆ ಚಂದ್ರನ ಬೊಟ್ಟನಿಟ್ಟ
ಚಂದ್ರ ಕಳೆಯ ಮುಖಕೆ
ಪತಿಯು ಬರುವ ದಾರಿ ಕಾಯ್ದು
ಸತಿಯಾಗಿ ಬದುಕ ಸವೆಸಿದೆ
ಬಾಳ ಬಂಡಿಯನೆಳೆಯುತಿರುವ ಗಾಲಿಯಾದೆ
ಬಾಲ್ಯದಲ್ಲಿಯೆ ತಾಳಿ ಕಟ್ಟಿ
ಮಾಯವಾದ ಮಸಣದಲ್ಲಿ
ವಿಧವೆಯಾದೆ, ಹುಚ್ಚಿಯಾದೆ
ಕೆಚ್ಚೆದೆಯಲಿ ಬದುಕುತಿರುವೆ



# ನನ್ನ ಪಯಣ

ನಾನು ನಡೆಯುತ್ತೇನೆ ನನ್ನ ಕಾಲುಗಳಿಂದ
ಒಮ್ಮೊಮ್ಮೆ ನೆಲದ ಮೇಲೆ
ಮತ್ತೊಮ್ಮೆ ಗಾಳಿಯಲ್ಲಿ
ಇನ್ನೊಮ್ಮೆ ನೀರಿನಲ್ಲಿ
ಆದರೂ ನಡೆಯುತ್ತೇನೆ ಎಡೆಬಿಡದೆ
ನೆಲದ ಮೇಲೆ ನಡೆಯುವಾಗ
ಆಧಾರವಿದೆ ಎನಿಸುತ್ತಿದೆ
ಬಗೆಬಗೆಯ ಪುಷ್ಪರಾಶಿಗಳ
ಹಾಸುಗಳು ಕಂಪ ಬೀರುತ್ತವೆ
ಅಲ್ಲಲ್ಲಿ ಮುಳ್ಳುಗಳು ಕಂತುತ್ತವೆ
ದಾರಿಗಡ್ಡ ಬೇಲಿಗಳು ಕಂದರಗಳು
ಗುಡ್ಡಕಾಡುಗಳು ಸಾಲುಗಟ್ಟಿ ನಿಂತಿರುತ್ತವೆ.
ಎತ್ತೆತ್ತಲೂ ಕಾಡುಗಳು
ಕ್ರೂರಮೃಗ ಖಗಗಳು
ಅಲ್ಲಲ್ಲಿ ಗೋರಿಗಳು ಮೋರಿಗಳು
ಸಮಾಧಿಯಿಂದ ನೆಗೆದಿದ್ದ
ಎಲುಬಿನ ಚೂರುಗಳು
ಸುತ್ತಲೂ ಊಳಿಡುವ ನರಿಗಳು, ನಾಯಿಗಳು
ಕತ್ತೆತ್ತಿದರೆ ಕಾಣುವುದು ಸುಂದರ ಬೆಳಕು
ಸೂರ್ಯ ಚಂದ್ರರಾ ಗಾಂಭೀರ್ಯದೊಡಲು
ನಕ್ಷತ್ರ ರಾಶಿಗಳು ಮಿಂಚುಗಳು
ನಾನು ನಡೆಯುತ್ತಲೇ ಇದ್ದೇನೆ ನನ್ನ ಕಾಲುಗಳಲ್ಲಿ
ನೀರಿನಲ್ಲಿ ಬಿದ್ದಾಗ ಚಳಿಯಿಂದ ನಡುಗುತ್ತೇನೆ.
ಮುಳುಗಿ ತೇಲುತ್ತೇನೆ, ನಡುಕದಲಿ ಹಲ್ಲು ಕಡಿಯುತ್ತೇನೆ.

ತುಟಿ ಕಚ್ಚುತ್ತೇನೆ, ಛಳಿಯಲ್ಲೂ ಬೆವರುತ್ತೇನೆ.
ಅಲ್ಲಿ ಮೀನಿನ ರಾಶಿಗಳು, ಸಹಸ್ರ ಚಿಪ್ಪುಗಳು
ತಳದಲ್ಲಿ ತೋರುತಿದೆ ಹವಳ ರಾಶಿಗಳು
ಬೊಗಸೆಯಲಿ ಕೊಂಡೊಯ್ಯುವುದಾದರೂ ಏನನ್ನ.
ಮುಳುಗಿ ಮುಳುಗಿ ಏಳುತ್ತೇನೆ
ಬೊಗಸೆ ತುಂಬಾ ತರುತ್ತೇನೆ.
ಮುತ್ತು ರತ್ನಗಳನ್ನಲ್ಲ, ಬರೆಮರಳರಾಶಿ
ಎಷ್ಟು ಆಳಕ್ಕಿಳಿದರೂ ನನಗೇನೂಸಿಗಲಿಲ್ಲ
ಎಲ್ಲವನೂ ಬಚ್ಚಿಟ್ಟಿದ್ದಳು ಈ ಗರ್ಭವತಿ ಜಲಧೀ.
ಮತ್ತೆ ನಡೆಯುತ್ತೇನೆ ಗಾಳಿಯಲಿ
ಇಲ್ಲಿ ಕಾಲುಗಳೆ ಇಲ್ಲ ಮೈಭಾರವಿಲ್ಲ
ಎತ್ತ ನೋಡಿದರೂ ಬರಿ ಶೂನ್ಯ
ಇನ್ನು ನಡೆಯಲಾರೆ ಮುಂದಕ್ಕೆ
ಹಿಂದಕ್ಕೆ ಸರಿಯುತ್ತೇನೆ, ನಾನಿದ್ದ ತಾಣಕ್ಕೆ.

O

# ನನ್ನ ಮುದ್ದಿನ ಕಂದ

ನನ್ನ ಮುದ್ದಿನ ಕಂದ
ನನ್ನ ಮನದಾನಂದ
ದಿನದಿನಕೂ ಕಾಣುತಿದೆ
ಬಲುಚಂದ ಕಂದ,
ನಿನ್ನ ಕೆಂದುಟಿಗಳು
ನಗುವ ಕುಳಿಕೆನ್ನೆಗಳು
ಗಾಳಿಗಾಡುವ ನಿನ್ನ
ಮುಂಗುರುಳುಗಳ ಸೊಬಗು
ಈ ನನ್ನ ದೇವತೆಯೆ

ಸಕ್ಕರೆಯ ಗೊಂಬೆಯೆ
ಅಕ್ಕರೆಯಲಿ ಮುದ್ದಿಸುವೆ
ಬಾರೆನ್ನ ಭಾಗ್ಯ ಸಿರಿಯೆ
ಈ ಪುಟ್ಟ ದೇಹದಲ್ಲಿ
ಎಷ್ಟೊಂದು ಚೇತನವು
ಇಷ್ಟವಾದದು ನನಗೆ
ನಿನ್ನಾಟ ಕಿರುಚಾಟವೆಲ್ಲಾ
ಪುಟಿಪುಟಿದು ನೀನಿಡುವ
ನಿನ್ನ ಹೆಜ್ಜೆಯ ಗುರುತು
ಮನೆಯ ತುಂಬಾ ಮೂಡಿಹುದು
ಏನದರ ಚಂದ ಅಂದ
ಅಡಿಗೆ ಮನೆಯಲು ನುಗ್ಗಿ
ಗಡಿಗೆ ಪಾತ್ರೆಯ ಕೆಡವಿ
ನಗುತ ನಿಂತಿರುವೆ ನೀನು
ಅದೆಷ್ಟು ಚಂದ ಕಂದ
ಒಂದಿಷ್ಟು ಗದರಿದರೆ
ಕಣ್ಣೀರ ಸುರಿಸುವೆ
ಎತ್ತಿ ಮುದ್ದಾಡಿದರೆ
ಎಲ್ಲವನೂ ಮರೆಯುವೆ.
ಮತ್ತೆ ನಗುವಿನ ಆಟ
ಅಳುವಿನ ಕಾಟ
ದಿನವು ಸಾಲದು ನನಗೆ
ಅವನ ತುಂಟಾಟದಲಿ.

○

# ಮರಳ ರಾಶಿಯಲೊಂದು ಕಣ

ಸಾಗರದದಡದಲ್ಲಿ
ಮರಳ ರಾಶಿಯ ನಡುವೆ
ನಾನೊಂದು ಮರಳ ಕಣವಾಗಬೇಕು
ಸಾಗರದಾರ್ಭಟದಲಿ
ಏರಿಳಿವ ತೆರೆಗಳು
ದಡಕಪ್ಪಳಿಸಿ ಹೊಡೆದಾಡಿ
ಬಡಿದಾಡಿ ಸೋತು ಸುಣ್ಣವಾಗಿ
ಒಂದರ ಹಿಂದೊಂದರಂತೆ
ಸಾಲಾಗಿ ಹಿಂಜರಿಯುವುದನ್ನು
ಕಣ್ಣಾರೆ ನಾನು ಕಾಣಬೇಕು
ಸಾಗರಕೋ ಬಲು ಸೊಕ್ಕು-ಮುಕ್ಕು
ಕೈಚಾಚಿ ಕಬಳಿಸುತ್ತಿದೆ ಸುತ್ತಲಿನ
ಕಸಕಡ್ಡಿಗಳ, ನರಿನಾಯಿಗಳನೆಲ್ಲ
ಮತ್ತೆ ಚೆಲ್ಲುತಿದೆ ಗರ್ಭದಾಳದ ಬದುಕು
ಹಲಬಗೆಯ ಏಡಿಗಳು, ಚಿಪ್ಪುಗಳು ಮೀನುಗಳ ರಾಶಿ
ಗುಟುಕರಿಸುತ್ತದೆ ತಿಮಿಂಗಿಲಗಳನ್ನು
ದೊಡ್ಡಮಾರಿ ಹಡಗುಗಳನ್ನು, ದೋಣಿಯನ್ನು
ಇದರ ಒಳಗುಟ್ಟು ಗಾಳಿಗೇ ಗೊತ್ತು
ಕತ್ತು ಹಿಡಿದು ಸುತ್ತಿಸುತ್ತಿ ಒಯ್ಯುತ್ತಿದೆ ಬಾನಂಗಳಕೆ
ಮರಳಿ ಅಪ್ಪಳಿಸುತ್ತಿದೆ ನೆಲಕ್ಕೆ
ಹಲವು ಜನರನು ನುಂಗಿ, ಊರನ್ನೇ ನುಂಗಿ
ಕಕ್ಕುವುದು ಇನ್ನೆಲ್ಲೋ ಅದನೆಲ್ಲಾ ನೋಡಬೇಕು
ಮರಳ ರಾಶಿಯಲಿ ನಾನು ಕಾಣದಿದ್ದರೂ ಕೂಡಾ
ಇದನೆಲ್ಲಾ ನೋಡುವ ಸೌಭಾಗ್ಯವಿರಬೇಕು
ಅದಕೆ ಮರಳ ರಾಶಿಯಲಿ ನಾನೊಂದು ಕಣವಾಗಬೇಕು.



# ನಿನಗೇನು ಬೇಕು

ಕಣ್ಣು ಕಾಣದಿದ್ದಾಗ
ಕಣ್ಣಿಗಾಗಿ ಕನವರಿಸುತ್ತೇವೆ
ಕಣ್ಣಿದ್ದಾಗಲೂ ಕುರುಡರಾಗಿ ಬದುಕುತ್ತೇವೆ
ಕಣ್ಣು ತೆರೆಯದೆಯೆ
ಕತ್ತಲೆಯೆಂದು ಅಳುತ್ತೇವೆ
ಕಿವಿ ಹೇಳದಾಗ
ಕಿವುಡರಾಗಿ ಬಾಳುತ್ತೇವೆ
ಕಿವಿ ಕೇಳವಾಗ
ಬೇಡದುದನ್ನು ಕೇಳುತ್ತೇವೆ.
ಬಾಯಿ ಬಾರದಾಗ
ಮೂಕವೇದನೆ ನಮಗೆ
ಬಾಯಿ ಬಂದಾಗ
ಹೊಲಸು ನುಡಿಗಳನ್ನಾಡುತ್ತೇವೆ
ಸತ್ಯ ನುಡಿಯಲು ಅಂಜುತ್ತೇವೆ
ಹಲವರನ್ನು ಹಳಿದು ಸುಖಿಸುತ್ತೇವೆ
ಕೈ ಇದ್ದಾಗ
ಕಟ್ಟಿಗೆ ಹಿಡಿದು ಹೊಡೆಯುತ್ತೇವೆ.
ಬೇಡದವರಿಗೆ ಕೈಕೊಡುತ್ತೇವೆ
ಕಾಲಿದ್ದಾಗ
ಒದೆಯಲು ಎತ್ತುತ್ತೇವೆ
ತಲೆ ಕೊಟ್ಟಾಗ
ದುರಾಲೋಚನೆ ತುಂಬುತ್ತೇವೆ

ಹರೆಯ ಕೊಟ್ಟಾಗ
ಎಲ್ಲಾ ತನಗೆ ಬೇಕು ಎನ್ನುತ್ತೇವೆ.
ಮುಪ್ಪಡರಿದಾಗ
ಮರಣ ಬೇಗ ಬರಲಿ! ಹಂಬಲಿಸುತ್ತೇವೆ.
ಏನು ಕೊಟ್ಟರೂ ತಪ್ಪು ನಿನಗೆ
ಕೊಡದಿದ್ದರೂ ತಪ್ಪು ನನಗೆ.

## ನಡೆದ ದಾರಿ

ನಾನು ನಡೆದು ಬಂದಿದ್ದೆ
ಆ ಹಾದಿಯಲ್ಲಿ
ಹೆಜ್ಜೆ ಹೆಜ್ಜೆಗೂ
ಕಲ್ಲು ಮುಳ್ಳುಗಳನ್ನು
ತುಳಿದು ಕೊಂಡಿದ್ದೆ

ದಾರಿತಪ್ಪಿದ್ದಿ ಜಾರಿ ಬೀಳುತ್ತಿ
ಎಚ್ಚರಿಸಿದರೂ ನನ್ನನ್ನು
"ತಪ್ಪು ಹೆಜ್ಜೆಯನಿಟ್ಟದ್ದಿ
ಮುಂದಕ್ಕೆ ಅನುಭವಿಸುತ್ತಿ ಜೋಕೆ"
ಎಂದರು ಹಲವರು.

ಆದರೂ ನಾನು ನಡೆದೇ ನಡೆದೆ
ಕಲ್ಲು ಮುಳ್ಳುಗಳ ನಡುವೆ
ಕಾಲನಿರಿಸಿ, ಅವುಗಳನು ಸರಿಸಿ
ನನ್ನ ಹಿಂದೆ ಬಂದರು ಹಲವರು

ಕಲ್ಲು ಮುಳ್ಳುಗಳ ಸರಿಸಿ
ಈಗ ದಾರಿ ಸರಾಗವಾಯಿತು
ಆಗ ಜನರೆಂದರು
"ಇದುವೆ ಸರಿಯಾದ ದಾರಿ
ಹೋಗಿರಲ್ಲ ಹಲವು ಬಾರಿ ಯಾರೂ ಬಿದ್ದಿಲ್ಲ ಕೆಳಗೆ
ಇಳಿಜಾರಿನಲ್ಲಿ
ಮುಂದಕ್ಕೆ ಹೋಗಿ
ಭಯ ಪಡಬೇಡಿ"
ಪ್ರೋತ್ಸಾಹಿಸಿದರು ಮಂದಿ
ಅಂದಿಗೂ ಇಂದಿಗೂ
ಅಂತರವು ಎಷ್ಟು? ಎಷ್ಟು?



## ಹೃದಯದ ಭಾರ

ನನ್ನ ಹೃದಯ ಭಾರವಾಗಿತ್ತು
ಎತ್ತಲಾರದಷ್ಟು
ಹೊರಲಾರದಷ್ಟು
ಅದರಲ್ಲಿ ತುಂಬಿತ್ತು ಬರೆ ನೋವು
ಹೇಳಲಾರದಷ್ಟು
ಕೇಳಬಾರದಷ್ಟು
ಅತ್ತು ಕರೆದಾಗಲೂ
ಹೊರಬರಲಾರದಷ್ಟು
ಸಿಕ್ಕಿ ಹಾಕಿಕೊಂಡಿತ್ತು
ಕೈ ಹಾಕಿ ಎಳೆದರೂ
ಹೊರ ಬಾರದಿತ್ತು

ಬೇಗುದಿಯು ಎದೆಯಲ್ಲಿ
ಹೆಪ್ಪುಗಟ್ಟಿ ಕೂತಿತ್ತು
ಸುಡುವ ನಿಟ್ಟುಸಿರಿಗೂ
ಕರಗದೆ ಹಾಗೆ ಉಳಿದಿತ್ತು
ಕಣ್ಣು ತೆರೆದಿಟ್ಟಾಗಲೂ
ಮನವು ಮುಸುಕು ಹಾಕಿತ್ತು
ಅತ್ತಿತ್ತ ನೋಡಿದರು
ಏನೂ ಕಾಣದಾಗಿತ್ತು
ಮನವು ಅಲೆದಾಡಿ
ಒಳಗೆ ಸೇರುತ್ತಿತ್ತು
ಹೃದಯದ ಮಾತೆಲ್ಲಾ
ಮೂಕವಾಗುತ್ತಿತ್ತು
ಕೊನೆಗೊಮ್ಮೆ ಕರಗಿತ್ತು
ಹೃದಯದಾಳದ ನೋವು
ಕಣ್ಣೀರಧಾರೆಯಾಗಿ
ಹರಿಯುತ್ತಿತ್ತು ಹೊರಗೆ

## ಸಾಗರದ ಸೊಗಸು

ಮಲೆನಾಡಿನ ಕಾಡಿನಲಿ
ಮಂಜು ಹನಿ ಬಿದ್ದಾಗ
ಮೈಮರೆತು ನಾನದರ ಸವಿಯುಂಡೆನು
ಚಳಿಗಾಳಿ ಬೀಸಲು
ಉದಯ ರವಿ ಮೂಡಿರಲು

ಮೈಮನವು ಅರಳಿತ್ತು ಆನಂದದಿಂದ
ಕೆಂಪು ಹವಳದ ಹೂವು
ಹಳದಿ ದಳಗಳ ಚಿತ್ರ ಬರೆದಿತ್ತು
ಮುಳ್ಳು ಬೇಲಿಯ ಮೇಲೆ
ಬೆಳ್ಳನೆಯ ಹೂವುಗಳೂ
ಬೆಳ್ಳಕ್ಕಿ ಸಾಲುಗಳಾಗಿ ಮೆರೆದಿತ್ತು
ಕೊಯ್ಯಲು ಬಾರದು
ಮುಡಿಯಲು ಬಾರದು
ಅಂದವ ಸವಿಯಲು ಬಲು ಸೊಗಸು
ಕಾಡುನಾಡಿನ ಮಧ್ಯೆ
ರಥವೇರಿ ಕುಳಿತವು
ಬಂಗಾರದ ಗಿಣಿಗಳು ಗರಿಗೆದರಿ
ಚಿಟ್ಟೆ ಕೀಟಗಳಲ್ಲಿ
ಬಟ್ಟಲಲ್ಲಿ ಮೆದ್ದವು
ಹನಿ ಜೇನ ಕುಡಿದು ಕುಪ್ಪಳಿಸಿದವು
ಕಾಯಾಗಿ ಹಣ್ಣಾಗಿ
ಬಣ್ಣ-ಬಣ್ಣಗಳಲ್ಲಿ
ಕಾಡಿಸಿ ಬದುಕಿಗೆ ತಿನಲೆಂದು
ಮಾವು ಬೇವುಗಳೆಲ್ಲ
ಹೂವು ಮುಡಿದು ಕುಳಿತವು
ಕೋಗಿಲೆ ಮರವೇರಿ ಕೂಗುಟ್ಟಿತು
ಚಿಲಿಪಿಲಿಗಾನದಿ
ಪಕ್ಷಿಗಳು ಕೂಗಿದವು
ಗುಟುಕನಿತ್ತವು ತಮ್ಮ ಮರಿಗಳಿಗೆ
ಸಡಗರದ ಬೀಡಿದು
ಸವಿದಷ್ಟು ರುಚಿಯೆಂಬ ಸಾಗರವು

# ಮಡಿಲ ತುಂಬಿದ ಗಿಡ

ಮಡಿಲ ತುಂಬಿದೆ ನನ್ನ ಗಿಡವು
ನೋಡಬನ್ನಿ ತವಕದಿ
ರೆಂಬೆ ಕೊಂಬೆಗೂ ಹೂವ ತುಂಬಿ
ರಂಭೆಯಾಗಿ ನಿಂತಿದೆ
ಮುಡಿಯ ತುಂಬ ಹೂವು ಮುಡಿದು
ವಧುವಿನಂತೆ ನಾಚಿದೆ
ಕೆಂಪು ಬಿಳಿಯ ಹಳದಿ
ಹೂಗಳು ಒಡಲಿನಲ್ಲಿ ತುಂಬಿವೆ.
ಹಚ್ಚ ಹಸುರಿನ ಹಾಸಿನಲ್ಲಿ
ಮುಸುಕು ಹೊದ್ದು ಕೂತಿದೆ
ಗಗನಮುಖಿಯು ನನ್ನ ಗಿಡವು
ಭೂಮಿಗಿಕ್ಕಿತು ಮಲ್ಲಿಗೆಯ
ಹರುಷವದಕೆ ವರುಷಕ್ಕೊಮ್ಮೆ
ಒಡಲು ತುಂಬುವ ಕಾತರ
ವರುಷ ವರುಷವು ಚಿಗುರಿ ತರುವ
ನನ್ನ ಗಿಡವೇ ಸುಂದರ



# ನನ್ನ ಕವನಗಳು

ನನ್ನ ಕವಿತೆಗಳಿಗೇಕೋ
ನನ್ನ ಮೇಲೆ ಮುನಿಸು
ಕಂಡಿಯಲಿ ತೂರಾಡಿ
ಗಾಳಿಯಲಿ ಹಾರಾಡಿ
ಎತ್ತೆತ್ತಲೋ ಹೋಯಿತು ನನ್ನ ಮರೆತು
ರೆಕ್ಕೆ ಬಡಿವ ಬೆಳ್ಳಕ್ಕಿ ಸಾಲಿನಂತೆ
ಭೂಮಿಯಾಗಸದಲ್ಲಿ ಮರೆಯಾಯ್ತು ಅಂದು
ಕತ್ತಲೆಯೊಳು ಬಿದ್ದು ಸಾಕಾಯಿತಂತೆ
ಉಸಿರುಕಟ್ಟುವ ನೋವು ನಮಗೇಕಂತೆ
ಇನ್ನೆಂದೂ ಬರಲಾರೆವು ನಿನ್ನ ಬಳಿಗೆ
ಅಣಕಿಸಿ ಮೋರೆ ಸಿಂಡರಿಸಿ, ಹೋದುವು
ಹಾರಾಡಿ ಹೋದುವು ಬಿಡಿಬಿಡಿಯಾಗಿ
ಮಳೆಯ ನೀರಲಿ ತೋಯ್ದು
ಬಣ್ಣ ಕಳಚಿದುವೆಷ್ಟೊ
ಕೆಸರು ಗುಂಡಿಗೆ ಬಿದ್ದು ಪ್ರಾಣ ಕಳೆದವು ಮತ್ತೆ
ಗಾಳಿಯಲಿ ಹಾರಾಡಿ
ಸಿಗುರು ಸಿಂಗಾರವಾಗಿ
ಹೇಳ ಹೆಸರಿಲ್ಲದಂತೆ ಮಾಯವಾದವು
ಬನ್ನಿರೋ ಒಳಗೆ ನಾನಿದ್ದೇನಲ್ಲ
ಎಂದರೂ ಕೇಳದೆ ಹಾರಾಡಿದುವು
ಎಲ್ಲೊ ಕಣ್ಮರೆಯಾದುವು, ನೋವಾಗಿತ್ತು
ಆದರೂ ಒಮ್ಮೊಮ್ಮೆ ಕೇಳುತ್ತಿದ್ದ ಧ್ವನಿಗಳು
ನನ್ನೊಡಲಾಳದ ಪ್ರತಿಧ್ವನಿಗಳು

○

# ಕನಸಿನಲಿ ಕಂಡದ್ದು

ಕನಸಿನಲಿ ಕಂಡದ್ದು
ಬೆಳ್ಳಕ್ಕಿ ಸಾಲುಗಳು
ಬಣ್ಣ-ಬಣ್ಣದ ಹೂವುಗಳ
ಮೇಲೆ ಬುಗುರಿಗಳು ನೂರು
ಭುವಿಗಿಳಿದ ತಾರೆಗಳು
ಬಂಗಾರದ ರೇಕುಗಳು
ಗೆಜ್ಜೆನಾದಗಳಂತೆ
ಕೊರಳ ಉಲಿಗಳು
ಕುಣಿದು ಕುಪ್ಪಳಿಸಿದ
ದೇವ ಕನ್ಯೆಯರು
ವೃಂದಾವನಕೆ ಬಂದ
ಗೋಪ ಕನ್ನಿಕೆಯರು
ಮಂದ ಮಾರುತವು ಅಲ್ಲಿ
ಕೆಂಪು ಲೇಪನ ನಭಕೆ
ಚಾಮರವ ಬೀಸುತಿದೆ
ಚಿಗುರೆಲೆಯು ತಾಪಕ್ಕೆ
ಅಚ್ಚರಿಯ ಬಾನಿನಲಿ
ಮತ್ತೆ ಬಣ್ಣ-ಬಣ್ಣದ ಸುಳಿಯು
ಕೆಚ್ಚೆದೆಯ ಭೂಮಿಯನು
ತಬ್ಬಲಿಕೆ ಬಾಗಿಹುದು
ಬುರ್‍ರೆಂದು ಹಾರಿದವು
ನನ್ನ ಬೆಳ್ಳಕ್ಕಿ ಸಾಲುಗಳು
ಕನಸಿಗಿಷ್ಟು ತಿನಿಸಕೊಟ್ಟ
ಮತ್ತೆಂದು ಕಾಣಲೇ ಇಲ್ಲ, ಎತ್ತ ಹೋದವೋ ಏನೋ?

# ಸಪ್ತಪದಿ ತುಳಿದಾಗ

ಸಪ್ತಪದಿಗಳ ತುಳಿದಾಗ
ಸುಪ್ತಾಸೆ ಚಿಗುರಿತ್ತು
ಸತಿಪತಿಗಳಾದಾಗ
ಬಾಳಸುಖ ದೊರಕಿತ್ತು
ಪ್ರೀತಿ–ಪ್ರೇಮದ ನಡುವೆ
ಚುಕ್ಕಾಣಿಯನು ಹಿಡಿದೆ
ದೋಣಿಯನು ನಡೆಸಿ
ಮುಂದು ಮುಂದಕೆ
ಈ ಬಾಳ ಬಂಡಿಲಿ
ನಾವಿಬ್ಬರು ಜೋಡಿಗಳು
ಸರಸ–ವಿರಸಗಳೆಂಬ
ಎರಡು ಗಾಲಿಗಳು
ನನ್ನೆದೆಯ ಹಾಡಿಗೆ
ನಿನ್ನದೇ ಕವಿತೆ
ಬಾಳ ಬಂಡಿಯನೆಳೆದು
ಸಾಗುವೆವು ಮುಂದು ।

# ದೇಹದೊಳಗಿದ್ದದ್ದು

ಈ ದೇಹಗೂಳಗೆ ಬಚ್ಚಿಟ್ಟಿದ್ದು
ಬರೆಮಾಂಸ ಮೂಳೆ ಮಾತ್ರವಲ್ಲ
ನರನಾಡಿಗಳು ಹರಿಯುತ್ತಿರುವನೆತ್ತರು
ಎದೆಯಗೂಡು, ಶ್ವಾಸಕೋಶ
ಮೂತ್ರ ಪಿಂಡಗಳು, ಗರ್ಭಕೋಶ ಇಷ್ಟೆ ಅಲ್ಲ?
ಕಾಣಲಾರದ್ದು ಹೇಳಲಾರದ್ದು, ಕೇಳಲಾರದ್ದು
ಹೇಸಿಗೆ, ಕೆಟ್ಟನಾಥದ್ದು-ಕೊಳೆತದ್ದೂ ಕೂಡ
ಸಾವಿರಸುಳ್ಳುಗಳು ಅಡಗಿ ಕೂತಿವೆ -
ಅನಂತ ಅಪರಾಧಗಳು ಮುಳುಗಿ ಹೋಗಿವೆ
ಅನ್ಯಾಯ, ಮೋಸಗಳ ಸರಪಣಿಯೇ ಇದೆ
ದೇಹಾಲಂಕಾರದಲಿ ಅವೆಲ್ಲವೂ ಮರೆಮಾಚಿವೆ
ಬಗೆ-ಬಗೆಯ ಬಣ್ಣದ ಉಡುಪುಗಳಲಿ
ರಂಗುರಂಗಿನ ಮಾತಿನಲಿ ಸುತ್ತ ತಿರುಗುತ್ತಿವೆ
ಅಂತರಾಳದಲಿ ಭಾವತಳವಳಿಸುತ್ತಿದೆ
ಕುದಿಕುದಿದು ದಿನವೂ ತಳ ಸೇರುತ್ತದೆ
ಎಷ್ಟು ಕಣ್ಣೀರ ಸುರಿಸಿದರೂ ಶಮನವಾಗದ ನೋವು
ಎದೆಯಲ್ಲಿ ವ್ರಣವಾಗಿ ಕಾಡುತ್ತಿರುವುದು
'ಹೊಟ್ಟು' ಕಿತ್ತಾಗ ಹಸಿಯಾಗಿ ಸೋರುವುದು
ಎಷ್ಟೋ ಸಲ ನೆನಪುಗಳು ಹಸಿಯಾಗುತ್ತವೆ
ಬತ್ತಿದಾ ತೊರೆಗಳಂತೆ ಮತ್ತೆ ಪುಟಿದೇಳುತ್ತವೆ
ಎದೆಯು ಸೀಳುತ್ತವೆ, ಮನವ ಕೆಣಕುತ್ತವೆ
ನಿದ್ದೆಯನುಗೆದ್ದು ಮರುಳಾಗಿಸುತ್ತವೆ

ಹೇಳದ ಕಾಯಿಲೆಗಳು, ಹೇಳಲಾರದ ನೋವುಗಳು
ನಿತ್ಯ ಸಂಕಟಕ್ಕೆಂದೇ ನಡೆದ ಹಲವಾರು ಘಟನೆ
ಮನವನು ಕುಲುಕಿ ಕಲಕುತ್ತವೆ – ಸೊರಗಿ
ಅದರೊಂದಿಗೆ ದೇಹವೂ ಸಂತಾಪ ಸೂಚಿಸುತ್ತದೆ
ಬಲು ಮೋಹದ ಈ ದೇಹ ಮಾನವನ ಸಂಪತ್ತು
ಸದಾ ಆಪತ್ತು, ವಿಪತ್ತುಗಳಲ್ಲಿಯೇ ಬೆಳೆಯುತ್ತದೆ
ಸುಖ–ದುಃಖಗಳನು ತಕ್ಕಡಿಯಲಿಟ್ಟು ತೂಗುತ್ತದೆ
ಡೋಲಾಯಮಾನದಲಿ ಸಾಗುತಿದೆ ಬದುಕು
ಒಂದು ನಿಮಿಷವೆ ಸಾಕು ತಾನಿಲ್ಲವಾಗುತ್ತದೆ
ತನ್ನೊಂದಿಗೆ ಕೊಂಡೊಯ್ಯುತ್ತದೆ ಬಚ್ಚಿಟ್ಟ ಭಂಡಾಗಗಳನೆಲ್ಲಾ
'ಹಿಂದಿದ್ದೆ' ಎಂಬ ನೆನಪೊಂದನ್ನು ಬಿಟ್ಟು
ಮುಂದಿನಾ ಪೀಳಿಗೆಗೆ ಬದುಕುಕೊಟ್ಟು ಸಾಗುತ್ತದೆ

## ಹರುಕು ಬಾಯಿರಂಗ

ತಿರುಕನಲ್ಲ ಅವನು ನಮ್ಮ ಹರುಕು ಬಾಯಿ ರಂಗನು
ಹೊಟ್ಟೆ ಹೊರೆಯಲೆಂದು ಅವನು
ಲೊಟ್ಟೆ ಮಾತ ನುಡಿವನು
ಮಾತು ಮಾತಿಗೂ ರಂಗು ಬೆರಸಿ
ಮನಕೆ ಮುದವ ಕೊಡುವನು
ಮನೆಗೆ–ಮನೆ ಹೋಗುತಿರುವನು
ಊರ ಸುದ್ದಿ ತರುವನು
ಕಳವು ಮೋಸ ಸಾಲು–ಸಾಲು
ಕದ್ದ ಮಾಲಿನ ವಿವರವೂ

ಕಂದನನ್ನೇ ಕದ್ದ ಸುದ್ದಿ
ಮೂಲೆ ಮನೆಯ ಕಮಲೆಗೆ
ಎಲ್ಲಾ ಸುದ್ದಿಗಳ ಹೊತ್ತು ತರುವನು
ಕಳ್ಳ ಹೆಜ್ಜೆಲಿ ಬರುವನು
ಮನೆಯ ಹಿಂದಿನ ಜಗಲಿ ಮೇಲೆ
ಕುಳಿತುಕೊಳ್ಳುವ ಪರಿಯನು
ಹರಿದಧೋತಿ, ಮುರುಕು ಛತ್ರಿ
ಸವೆದು ಹೋದ ಪಾದುಕೆ
ತೆರೆದ ಅಂಗಿ ತೇಪೆಯದಕೆ
ಕಪ್ಪು ಟೊಪ್ಪಿಗೆ ತಲೆಗಿದೆ –
ಕದಿಯಲಾರ, ತೆಗಳಲಾರ
ಕೊಟ್ಟ ತುತ್ತನು ತಿನುವನು
ಬಂಧುವಿಲ್ಲ ಬಳಗವಿಲ್ಲ
ಜಗವೆ ಅವನ ಅರಮನೆ –
ಮಕ್ಕಳನ್ನೇ ಆಟಕೆಳೆವ
ಮುದ್ದು ಕೊಟ್ಟು ಕುಣಿಸುವ
ರಂಗಮಾಮ ಬಂದರಾಯ್ತು
ಬುಗುರಿಯಂತೆ ಸುತ್ತುವ ಮಕ್ಕಳು
ಬಟ್ಟೆ ಬರೆಯ ನೀವರು
ಅಷ್ಟು–ಇಷ್ಟು ಕಾಸುಕೊಟ್ಟು
ಕರುಳ ಪಾಶವ ತೋರ್ವರು

○

# ಬಸ್ಸು ಮೊಗಚಿತು

"ಬಸ್ಸು ಮೊಗಚಿತು ಹಾದಿಯಲ್ಲಿ
ನಿನ್ನ ಅಪ್ಪನ್ನ ಕಂಡೆನು
ಮೂರು ಜನರು ಸತ್ತರಂತೆ ನಾಲ್ಕು ಮಂದಿಗೆ ಗಾಯವು"
ನುಡಿಯ ಕೇಳಿ ನಡುಗಿ ಹೋದೆನು
ತವರಿನ ದಾರಿಯ ಹಿಡಿದೆನು
ಊರ ಸೇರಲು ತವಕ ನನಗೆ
ಸತ್ತವರಾರೋ ತಿಳಿಯದು
ಎದೆಯು ಢವ ಢವ ಗುಟ್ಟುತಲಿತ್ತು
ಕಣ್ಣು ಹನಿಯ ಸುರಿಸಿತ್ತು
"ಸತ್ತರು ಹಲವರು ದಾರಿಯಲ್ಲಿ
ಉಳಿದವರು ಬಿದ್ದರು ರಾಡಿಯಲ್ಲಿ
ಗಾಯಗಳಾದುವು ಕೆಲವರಿಗೆ
ಸಾವಿನ ನೋವಿನ ಕತೆಗಳಿಗೆ –
ಮಕ್ಕಳನ್ನು ಮನೆಯನು ಲೆಕ್ಕಿಸದೆ
ನಡೆದೆನು ಊರಿಗೆ ತವಕದಲಿ
"ಅಪ್ಪನಿಗೇನೂ ನೋವಿಲ್ಲ
ತಂಗಿಯರಾಗಲೆ ಮುತ್ತಿದರು
ಅಣ್ಣನು ಬಂದನು ಹರುಷದಲಿ
ದೇವನ ನೆನೆದೆನು ಕ್ಷಣದಲ್ಲಿ
ಊರಿಗೆ ಮರಳಿದೆ ತೃಪ್ತಿಯಲಿ

○

# ದೇವರೇ, ನೀನು ಯಾರು?

ನಿನ್ನ ಸೃಷ್ಟಿಗಿಂತಲೂ
ನಿನ್ನ ಸೃಷ್ಟಿಯದೇ ಚಿಂತೆ ನನಗೆ
ಹೆಸರ ಕೊಟ್ಟವರಾರು ನಿನಗೆ
ತಂದೆ–ತಾಯಿ ಯಾರು ಹೇಳು
ಎಲ್ಲಿ ಹುಡುಕಿದರೂ ನಿನ್ನ
ಕುಲಗೋತ್ರದ ಹೆಸರೇ ಇಲ್ಲ
ಬ್ರಹ್ಮ. ವಿಷ್ಣು, ಮಹೇಶ್ವರರು
ಒಬ್ಬರೋ ಇಬ್ಬರೊ ಮೂವರೋ?
ಸೃಷ್ಟಿಗೊಂದು ಹೆಸರು ಪುಷ್ಟಿಯು
ಸ್ಥಿತಿಗಿನ್ನೊಂದು ನಾಮಕರಣ
'ಲಯ'ದ ನಾಯಕ ಮಹಾದೇವನೆಂದು
ಹೆಸರ ಕೊಟ್ಟವರಾರು ನಿನಗೆ ।
'ಸಂಗೀತ' ಕ್ಕೊಂದು ದೇವತೆಯಂತೆ
ವಿದ್ಯೆ ಕೊಟ್ಟವಳು ಶಾರದೆ –

ನಾನು ಮೇಲೆ, ನೀನು ಕೆಳಗೆ
ಮತಾಂಧತೆಯಲಿ ಹೊಡೆದಾಟವು
ದೇವಾಲಯಗಳ, ಮಸೀದಿಗಳಲ್ಲಿ
ರಕ್ತದೋಕುಳಿ ನಡೆದವು
ನಿನ್ನದೆ ಸೃಷ್ಟಿ ಎಂದ ಮನುಜ
ನರ ಬಲಿಗಳ ಕೊಟ್ಟರು
ನಿನ್ನೊಲುಮೆಗಾಗಿ ಹಂಬಲಿಸಿ
ನಿನ್ನದೇ ಸೃಷ್ಟಿಯ ಕೊಲುವರು

## ಈ ಬದುಕು

ಬದುಕೆಂಬುದೇ ಅಜ್ಞಾನ
ಬದುಕ ಕೊಟ್ಟವನು ಅಂತರ್ಧಾನ
ಜೀವ-ಜೀವಿಗೂ ಬರೆದ ಅವಸಾನ
ಎಲ್ಲವೂ ತನದೆಂದು, ತನಗೇ ಬೇಕೆಂದು
ಆಸ್ತಿ-ಅಂತಸ್ತುಗಳ ಜೀವನಕೆ ಸುತ್ತಿಕೊಂಡು
ಅತ್ತಿತ್ತ ಅಲುಗಾಡದೆ ಬದುಕಿಕೊಂಡೆ
ಶೃಂಗಾರದೊಡವೆಗಳಿಂದ ಶೃಂಗರಿಸಿಕೊಂಡೆ
ಬಂಗಾರದೊಡವೆಗಳ ಹೇರಿಕೊಂಡೆ
ಬಗೆ-ಬಗೆಯ ಭಕ್ಷ್ಯಗಳ ತಿಂದು ತೇಗಿಕೊಂಡೆ
ಸಂಸಾರ ಸಾಗರದಿ ತೇಲಾಡಿಕೊಂಡೆ
ಎಲ್ಲರೂ ತಮ್ಮವರು ನನ್ನವರೆಂದುನಲಿದೆ
ಜೀವ ಹೋದಾಗ  ಎಲ್ಲವನು ಕಳೆದುಕೊಂಡೆ ।

O

## ಒಂದು ಜೀವಿಯ ಸದ್ಗತಿ

ಸುತ್ತಲೂ ಹದ್ದುಗಳು ಹಾರುತ್ತಿರುತ್ತವೆ
ರಣಹದ್ದುಗಳು ಹಾರಿ ಬರುತ್ತಿವೆ.
ಕುಕ್ಕಿ ತಿನ್ನಲಿಕ್ಕೆ ಹರಿದು ಮುಕ್ಕಲಿಕ್ಕೆ
ಜೀವ ಹೋಗಲಿಲ್ಲವಲ್ಲಾ ಇನ್ನೆಷ್ಟು ಕಾಯಲಿ
ಎನ್ನುವ ಕಳವಳ ಮನದಲ್ಲಿ
ಕಾದು-ಕಾದು ಸಾಕಾಗಿ, ಕೆಲವು ಹಾರಿ ಹೋಗುತ್ತವೆ

ಮತ್ತೆ ಕೆಲವು ಕುಕ್ಕಿ ನೋಡುತ್ತವೆ. ಜೀವ
ಒಂದು ಕಣ್ಣು ಕುಕ್ಕಿದರೆ, ಇನ್ನೊಂದು ಬಾಲವನ್ನು
ರಕ್ತ ನೆಕ್ಕುತ್ತವೆ, ಕಚ್ಚಿ ಕಚ್ಚಿ ತಿನ್ನುತ್ತವೆ
ಹಸಿ ಮಾಂಸವನ್ನು ಬಿಸಿರಕ್ತವನ್ನು
ಜೀವನರಳಿದರೂ, ಅತ್ತಿತ್ತ ಹೊರಳಿದರೂ
ಅವಕಿಲ್ಲ ಚಿಂತೆ, ಹೀಗೇ ಸಾಯುತ್ತದೆ
ಹದ್ದುಗಳು ಹಾರಿ ಬರುತ್ತವೆ ವಿಮಾನಗಳಾಗಿ
ನಿಮಿಷದಲಿ ದೇಹವನು ನುಂಗುತ್ತವೆ
ಬಿಟ್ಟೋಡುತ್ತವೆ ಬರಿ ಅಸ್ಥಿ ಪಂಜರ
ಅದನ್ನು ಕಬಳಿಸುತ್ತವೆ ನರಿ-ನಾಯಿಗಳು
ಹೀಗೆ ಒಂದು ಜೀವಿಯ ಕತೆ ಸಮಾಪ್ತಿ
ಅದಕ್ಕೆ ಅನ್ನುತ್ತಾರೆ ಜೀವ ಹೋಗುತದೆ
ವಿಮಾನದಲ್ಲಿ ಸ್ವರ್ಗಕ್ಕೆ ನೇರವಾಗಿ
ಅಲ್ಲಿ ಸುಖ-ಶಾಂತಿ ದೊರಕಲಿದೆ ಜೀವಿಗೆ
ಎಷ್ಟು ಸತ್ಯದ ಮಾತು ಎದುರಾಡಲಿಕ್ಕಿದೆಯೇ

## ಕಾನನದ ಮರ

ಯಾರು ಬರುವರು
ಎಂದು ನೀನು ಮೊಗ್ಗು
ಬರಿಸಿ ಕುಳಿತಿಹೆ
ಹಸಿರುಡೆಯ ತೊಟ್ಟು ನೀನು
ನಸುನಾಚಿ ನಿಂತಿಹೆ
ತಂಗಾಳಿಗೆ ಮೈಯ್ಯನೊಡ್ಡಿ
ಥಳುಕು ಬಳುಕಿ, ಬಾಗುವೆ
ಬರುವ ಅತಿಥಿ ಸುಳಿವ ಕೊಟ್ಟನೆ?

ಝೇಂಕಾರವು ಮೊಳಗಿತೆ ?
ಮಧುಪಾನದ ಬಟ್ಟಲಲ್ಲಿ
ರೆಕ್ಕೆ ಬಿರಿದು ಕುಳಿತನೆ
ಚಿಲಿ–ಪಿಲಿಯ ಉಲಿತ ಕೇಳಿ
ಎದೆಯನುಬ್ಬಿಸಿ ಕುಳಿತೆಯ ?
ಸೌಂದರ್ಯ ರಾಣಿ ನೀನು
ಕಾನನದ ಸುಂದರಿಯೆ ದಿಟವು
ಕೈಯ್ಯ ಬೀಸಿ ಕರೆದೆಯಲ್ಲ
ಒಡಲ ತುಂಬಿಸಿ ಕೊಂಡೆಯ?
ನಿನ್ನ ಬಯಕೆ ತೀರಿದಾಗ
ಫಲಿಸಿತಲ್ಲ ಒಡಲಲಿ
ಹೂವು–ಕಾಯಿ, ಹಣ್ಣು ತುಂಬಿ
ತುಳುಕುತಿತ್ತು ಒಡಲಲಿ
ನಿನ್ನ ಸೊಗಸು ಕಂಡು ಮನಸು
ಭ್ರಮೆಯ ಲೋಕದಿ ಮೆರೆಯಿತು

○

# ಹೃದಯ ಚೋರ

ಹಾಡ ಹಗಲಲಿ ಕಳ್ಳನೊಬ್ಬ ಬಂದ
ಅತ್ತಿತ್ತ ನೋಡುತಲಿ ಜೋಡಿ ಕಣ್ಣನು ಕದ್ದ
ಸುತ್ತ ಸುಳಿದಾಡಿ
ನನ್ನ ಮನವ ಸೂರೆಗೈದ
ರಾತ್ರಿಯಲೂ ಕನಸಲಿ ಬಂದು
ಮನವ ಪೂರ ಮೆದ್ದ
ಕಣ್ಣಿಂದ ಬಿಟ್ಟ ಬಾಣ
ನನ್ನೆದೆಯ ಹೊಕ್ಕಿತು

ಹಗಲು-ಇರುಳು ಹಂಬಲಿಸಿದ
ಮನವು ತಾಣ ಹುಡುಕಿತು
ಅವನ ಮುಂಗುರುಳು ನನಗೆ
ದುಂಬಿಯಾಗಿ ಕಂಡಿದೆ
ಓರೆ ತೆಗೆದ ಬೈತಲೆಯು
ತೀಡಿ ತಿದ್ದಿದಂತಿದೆ
ಎಂದು ಬರುವನೋ
ಎಲ್ಲಿ ಇರುವನೋ
ಚಿಂತೆಯೊಂದೇ ಮನದಲಿ
ಕಳ್ಳನವನು, ಎಲ್ಲಿ ಹೋದ
ನನ್ನ ಮನವ ಕದ್ದವ
ಮಿಡಿಯುತಿಹುದು ನನ್ನ ಮನವು
'ಮಿಲನ' ಸುಖದ ಕಾತರ

○

# ಚಿತ್ರಕಾರ

ಅವನೊಬ್ಬ ಚಿತ್ರಕಾರ
ಬಣ್ಣ ಬಣ್ಣಗಳಲ್ಲಿ
ಬರೆಯುತ್ತಾನೆ
ಚಿತ್ರ ವಿಚಿತ್ರ ಚಿತ್ತಾರಗಳ
ಸುತ್ತಲೂ ಚೆಲ್ಲಿದ್ದಾನೆ
ಬಣ್ಣಗಳ ಮಹಾಪೂರ
ಬೆರಳ ಸಂದಿಯಲಿ ಬಣ್ಣಗಳ ಸಾರ
ಸುತ್ತಲೂ ಬಿದ್ದಿವೆ ಮುರುಕು ಕುಂಚ
ಅವನಂಗಿ ಹರಿದಿದೆ, ಪೈಜಾಮ ಮಸುಕಿದೆ
ಆದರೂ ಬರೆಯುತ್ತಾನೆ

ಚಿತ್ರಗಳ ಸಾಲುಸಾಲು
ಹರುಕು ಚಾಪೆಯ ಹಾಸಿ
ಕೊಳಕು ಬಟ್ಟೆಯ ಹೊದ್ದು
ಹಾಯಾಗಿ ಮಲಗಿ ನಿದ್ರಿಸುತ್ತಾನೆ
ಆದರೂ ಬಣ್ಣ ಬಣ್ಣಗಳಲ್ಲಿ ಸೃಷ್ಟಿಸುತ್ತಾನೆ
ಪ್ರಕೃತಿ ಸೌಂದರ್ಯದ ಮೆರುಗ
ಕಾಮಿನಿಯರ ಸೊಬಗ
ಅವನೊಡಲು ತುಂಬುವುದಿಲ್ಲ
ಗಳಿಕೆಯೂ ಏನಿಲ್ಲ
ಭೋರ್ಗರೆವ ನದಿಗಳನ್ನು
ಘರ್ಜಿಸುವ ಹುಲಿಯನ್ನು
ಕುಣಿದಾಡುವ ನವಿಲನ್ನು
ಪ್ರಕೃತಿಯ ಪ್ರತಿಕೃತಿಯು
ಅವನ ಸೃಷ್ಟಿಯ ಸೊಬಗು.

○

# ಯುಗ ಯುಗಾದಿ ಬಂತಂತೆ

ನೀನು ಯಾವ ಯುಗಾದಿ ಆದಿ ಹೇಳು
ಬೇವು ಬೆಲ್ಲ ತಿನಿಸಲೆಂದು
ಓಡಿ ಓಡಿ ಬಂದೆಯಾ?
ಎಲ್ಲ ಯುಗಕೂ ಆದಿಯಂತೆ
ಬಂದು ಬಂದು ಹೋದಿಯಂತೆ
ನನ್ನ ಮನೆಯ ಬಾಗಿಲಿಗೇಕೆ
ಬರಿಯ ಬೇವು ಹೊತ್ತು ತಂದೆ
ಬೆಲ್ಲವನು ಸವಿಯಲೆಂದು
ಬಾಯಿ ತೊಳೆದು ಕುಳಿತುಕೊಂಡೆ
ಬೇವ ತುರುಕಿ ನಡೆದೆಯಾಕೆ

ಬಾಳಿ ಬದುಕ ಬೇಡವೆ?
ಹೊಸತನೊಂದ ಕೊಟ್ಟು ಹೋಗು
ಹಳೆಯದನ್ನು ಹೊತ್ತು ಹೋಗು
ಬರಿದೆ ಬಂದು ಹೋಗುತಿರುವೆ
ವರುಷಕೊಮ್ಮೆ ಭೂಮಿಗೆ
ಹರುಷವೆಂಬ ತಿನಿಸಿಗಾಗಿ
ವರುಷ ವರುಷ ಕಾದೆ ನಾನು
ಕರುಣೆ ತೋರಿ, ಹರಸೋ ನನ್ನ
ಬೆಲ್ಲ ಬೆರೆಸು ಬಾಳಿಗೆ
ನಿನ್ನ ಬರುವಿಗಾಗಿ ಮಾವು
ಹಸಿರು ಚಿಗುರು ತಂದಿದೆ
ನಿನ್ನ ಬರವ ತಿಳಿಸಲೆಂದು
ಹಕ್ಕಿಗಾನ ಹಾಡಿದೆ
ಹೊಸತು ಒಸಗೆಕೊಟ್ಟು ಹೋಗು
ಮನಕೆ ಶಾಂತಿ ಸುಖವ ನೀಡು
ಕೆಚ್ಚೆದೆಯಲಿ ಬದುಕಿರೆಂದು
ನಮ್ಮನ್ನೆಲ್ಲಾ ಹರಸಿಹೋಗು.

O

## ಕವಿತೆ ಬರೆದ ಕವಿಗೆ

ಏನೇನೋ ಗೀಚಿದ್ದಿ
ಕವಿತೆಯೆಂದು ಕರೆದಿದ್ದಿ
ಓದಲು ಬಾರದು
ಹಾಡಲೂ ಬಾರದ
ಅಕ್ಷರಗಳ ಸಾಲದು
ಅರ್ಥವಾಗದ ನುಡಿಯು

ನಿನ್ನಂತರಾಳವ ತೆರೆದಿಲ್ಲ
ಚಿಕ್ಕದಾದರೂ ಕವನ
ಚೊಕ್ಕವಾಗಿ ಬರೆದುಬಿಡು
ನಿನ್ನ ಮನದಾಳದ ಭಾವವ
ಪದರಾಗಿ ಬಿಚ್ಚಿಬಿಡು
ಪಾಂಡಿತ್ಯ ಪ್ರದರ್ಶನಕೆ
ಶಬ್ದಗಳ ಬೆರಸದಿರು
ಬಿಸಿ ತುಪ್ಪ ಗಂಟಲಿಗೆ
ಹೊಯ್ದಂತೆ ತೋರುವುದು ನೋಡು
ಅಶ್ಲೀಲ ಭಾಷೆಯಲಿ
ಮನವ ರಂಜಿಸದಿರು
ಕೆಸರು ಚೆಲ್ಲಿದಂತೆ
ಪರಿಶುದ್ಧ ಜಗಕೆ
ಅವಸರಿಸಿ ತಿಂದದ್ದು
ಪಚನವಾಗದು ನೋಡು
ನೀನು ಬರೆಯುವ ಮುನ್ನ
ಚಿಂತಿಸು, ಹಣ್ಣಾಗು
ಕಾವ್ಯವೋದಿದ ಮೇಲೆ
ಅರ್ಥಕೇಳಲು ನಿನ್ನ
ಹುಡುಕಾಡದಂತೆ
ಸರಳ ಸುಂದರ ಕವಿತೆಯ
ಬರೆದು ನೀ ಮುಗಿಸಿಬಿಡು
ಓದುಗರು ನಾವೆಲ್ಲ
ನಿನ್ನನರಿವೆವು ಅಂದು.



# ಬಸುರಿಂದ ಬಂದವರು

ಬಸುರಿಂದ ಬಂದವರು
'ಆಸರೆ' ತನಗೆಂದವರು
ಮಳೆಗಾಳಿಗೆ ಮೈಯೊಡ್ಡಿ
ಸ್ನಾನವೆಂಬರು ಜನರೆಲ್ಲಾ
ಕಲ್ಲಿಗೆ ಕೈ ಮುಗಿದು
ಪೂಜೆ ಮುಗಿಸಿದೆನೆಂದು
ತಾಳ ತಂಬೂರಿ ಮಿಡಿದು
ಭಜನೆ ಮಾಡುವರು
ದೇವನೊಲಿದನು ಎಂದು
ಅವನೊಡಹುಟ್ಟು ತಾನೆಂದು
ಮಿಥ್ಯೆಯನು ನುಡಿಯುವರು
ಠಕ್ಕರೇ ಈ ಜಗದಿ
ಯಾರಿಗೂ ಯಾರಿಲ್ಲ
ಯಾವುದು ಸ್ಥಿರವಲ್ಲ
ಸಾವಿನ ಬಚ್ಚಲಲಿ ಬಿದ್ದ
ಕೀಟಗಳು ನಾವೆಲ್ಲಾ ॥

# ದೇವರು

ನನ್ನ ಕಣ್ಣು ಕಾಣದಾಗ
ನಿನ್ನ ಇರವ ಕಂಡೆನು
ಮಾತನೊಂದು ನುಡಿಯಲಿಲ್ಲ
ಎದೆಯ ಗೂಡನು ಹೊಕ್ಕೆನು
ಕಾಣದಾದ ನೋವಿನಚಿಂತೆ
ಕೆಂಡದೊಳಗಿನ ಶಾಖದಂತೆ
ನಿನ್ನ ಇರವು ತಿಳಿದೆ ನಾನು
ಕಾಣದಿದ್ದರೂ ಮನದಲಿ
ಅರಳುತಿರುವ ಹೂವಿನಲ್ಲೂ
ಬೀಸುತಿರುವ ಮೋಡದಲ್ಲೂ
ಇರುವನೊಬ್ಬ ದೇವನು
ಹರಿವ ನದಿಯ ನೀರಿನಲ್ಲೂ
ಉರಿವ ಬೆಂಕಿ ಮಧ್ಯದಲ್ಲಿ
ಬೆಳಕಿನಲ್ಲಿ, ಕತ್ತಲಲ್ಲಿ
ಇರುವನೊಬ್ಬ ದೇವನು

# ಬಡತನವ ಕೊಡು ಎನಗೆ

ಬಡತನವ ಕೊಡು ಶಿವನೆ
ಬೇಸರವ ನಾಕಾಣೆ
ನೀಚ ತನವನು ಮಾತ್ರ
ಕೊಡ ಬೇಡವೆನಗೆ ॥
ಕಷ್ಟ ನಿಷ್ಠುರಗಳಿರಲಿ

ಹೋರಾಡಿ ಗೆಲ್ಲುವೆನು
ಹೊಟ್ಟೆಗಿಚ್ಚಿಗೆ ನಾನು
ನೀರಾಗಿ ಹರಿಯುವೆನು
ಅರಿವ ಕಣ್ಣನು ಕೊಡು
ಹರಿವ ಮನಸನು ನೀಡು
ಕರುಣೆಯುಕ್ಕಲಿ ಎದೆಯ
ಅಂತರಾಳದಲಿ ಸಾಕು
ಎನ್ನೀ ಬದುಕೇ ಎನಗೆ
ಧಾರಾಳ ಸಾಕೆಂಬೆನಿಲ್ಲಿ
ಏನು ಬಂದರೂ ಬರಲಿ
ಬದುಕುವ ಛಲವಿರಲಿ ಎನಗೆ

ಟ

## ನಿನ್ನಾಟವು

ಕಬ್ಬಾಗಿ ಕೊಬ್ಬಿ ನಿಂತಿದ್ದೆ ಹೊಲದಲ್ಲಿ
ರಸವಾಗಿ ಹರಿದು ಹೋದೆ ಆಲೆಯಲ್ಲಿ ॥
ಕೋಳಿಗೂಡಿನಲಿ ಕೊಬ್ಬಿದ ಹುಂಜವಾಗಿದ್ದೆ
ಹಬ್ಬದ ಊಟಕ್ಕೆ ಬಲಿಯಾದೆ ನಾನು
ಬಾಳೆಯ ಮರದಲ್ಲಿ ಗೊನೆಯಾದೆ ಸರ್ವದಲಿ
ಬಗೆಬಗೆಯ ಭಕ್ಷ್ಯಗಳಲಿ ಕರಗಿ ಹೋದೆ
ಗಂಧದ ಮರದಲ್ಲಿ ಪರಿಮಳವೆ ನಾನಾದೆ
ಕೊರಡಾಗಿ ಸವೆಸವೆದು ಮಾಯವಾದೆ
ನನ್ನ ಬದುಕಿದು ನನ್ನವೊಲ್ಲದ ಶಿವನೆ
ನಿನ್ನಾಟವೆ ಎಲ್ಲಾ ನನ್ನದೇನಿರಲಿಲ್ಲ ॥

೦

# ಹೊಸ ಕನಸಿಗೆ ಕರೆ

ಹೊಸ ಕನಸುಗಳೆ
ಓಡೋಡಿ ಬನ್ನಿ ।
ನನ್ನ ತನುಮನಗಳನು
ಬಿಗಿದಪ್ಪಿಕೊಳ್ಳಿ ॥
ಹಳೆಯ ಕನಸುಗಳೆಲ್ಲಾ
ಹಳಸಿ ಹೋದವು ಎಲ್ಲಾ
ಚಿಗುರು ಬಂದರು ಮತ್ತೆ
ಕೊನರಲಿಲ್ಲಾ
ಹೂವು ಕೊಟ್ಟರು
ಮುಂದೆ ಫಲಿಸಲಿಲ್ಲ
ಫಲವನಿತ್ತರು ಮುಂದೆ

ತಿನಲಾಗಲಿಲ್ಲ ।
ಕೆಲವಕ್ಕೆ ನೀರಿಲ್ಲ
ಹಲವಕ್ಕೆ ಬುಡವಿಲ್ಲ
ಮಿಕ್ಕಿದ್ದು ಸೊಕ್ಕಿನಲಿ
ಬರಲಿಲ್ಲ ಬಳಿಗೆ
ಹಲವು ಸೋಮಾರಿಗಳು
ಕೆಲವು ಅಹಂಕಾರಿಗಳು
ಕೆಲವಕ್ಕೆ ಬಳಿ ಬರಲು
ಮನಸಿರಲಿಲ್ಲವಲ್ಲಾ ॥
ಕನಸಿಲ್ಲದ ಬದುಕು
ಸಪ್ಪೆಯಾಗಿದೆ ನನಗೆ
ತಿನಿಸಿಲ್ಲದ ಬಾಯಿಗೆ

ಚಪ್ಪರಿಸಲು ಬೇಕೆಂಬ ಆಸೆ
ವರುಷ–ವರುಷಗಳು
ಕಳೆದು ಹೋಗಲು ನನಗೆ
ಕನಸುಗಳು ಬೇಕೇ ಬೇಕು
ಕನಸಿನಲೆ ಬಾಳು ಸವೆಯಬೇಕು

## ನೀನು – ನಾನು

ನೀನು ನಾನು
ನಾನು ನೀನು
ನಮ್ಮ ಬದುಕಲಿ
ನೀನು ಕಾಡು
ನಾನು ಹಸಿರು
ನೀನು ನದಿಯು
ನಾನು ಝರಿಯು
ನಮ್ಮ ಬದುಕು ಹೀಗಿದೆ
ನೀನು ಮೋಡ
ನಾನು ಮಳೆಯು
ನೀನು ಫಲವು
ನಾನು ಸವಿಯು
ನಮ್ಮ ಬದುಕು ಸಾಗಿದೆ
ನೀನು ಹಾಡು
ನಾನು ಧ್ವನಿಯು
ನೀನು ತಾಳ
ನಾನು ಲಯವು
ನಮ್ಮ ಬದುಕ ಹೆಣೆದಿದೆ
ಸುತ್ತು ಬಳಸಿ

ನುಡಿಯಲೇನು
ನೀನೆ ನಾನು
ನಾನೆ ನೀನು
ನಮ್ಮ ಬದುಕು ಸುಂದರ

○

## ನಗರದ ಬದುಕು

ನಗರಕ್ಕೆ ನಾ ಹೋಗಿ
ಇರಲಾರೆ ನನ್ನವ್ವ
ಕಳುಹಬೇಡ ನನ್ನ
ಆ ತಾಣಕೆ ॥
ಗಾಳಿ ಬೆಳಕಿಗೂ ಬೆಲೆಯು
ನಿಂತ ನೀರಿನ ಸೆಲೆಯು
ಸಂಸಾರ ಸಾಗಿಸಲು
ಬಲು ಬವಣೆಯಲ್ಲಿ
ಹಸಿರು ಮರಗಳೆ ಇಲ್ಲ
ಉಸಿರು ಬಿಡುವುದೆ ಇಲ್ಲ
ಹಲ ಬಗೆಯ ಹಕ್ಕಿಗಳ
ಚಿಲಿಪಿಲಿಯ ಕೂಗು ಕೇಳದಲ್ಲಿ
ನೆಂಟಕಿಂಬುವರಿಲ್ಲ
ಬಂಧು ಬಳಗವ ಕಾಣೆ
ಹರುಷ ಹಂಚಲು
ನನಗೆ ಗೆಳೆಯರಿಲ್ಲ
ಹರಿಯುವ ನದಿಯಿಲ್ಲ
ದನಿಗಳ ಧ್ವನಿಯಿಲ್ಲ

ನೇಗಿಲ ರೈತನ
ಕೊರಳುಲಿಯು ಕೇಳದಲ್ಲ
ಎತ್ತಲೂ ಕತ್ತಲೆ
ಊರೆಲ್ಲ ಬತ್ತಲೆ
ಮೆತ್ತನೆಯ ಹಾಸುಗೆಯು
ಒತ್ತೊತ್ತಿ ಬೇನೆಯಾಯ್ತು

o

## ಬಯಸಿದ ಸಾಮ್ರಾಜ್ಯ

ಕಂಡರಿಯದ ರಾಜ್ಯಕ್ಕೆ
ರಾಜನಾಗು ಎನಬೇಡ
ಉಂಡರಿಯದನ್ನವನು
ಗಂಟಲಿಗೆ ತುರುಕಬೇಡ
ನನ್ನ ರಾಜ್ಯದಲಿ ಇಹರು
ಕುರುಡರೂ ಕುಂಟರು
ಹಸಿದ ಹೊಟ್ಟೆಗೆ ತಿರುಪೆಯ
ನೆತ್ತಿ ಬದುಕುವವರು
ಎಲ್ಲವನು ತಿಂದವರು
ಬವಣೆಯಲಿ ಬೆಂದವರು
ನನ್ನ ರಾಜ್ಯದ ಪ್ರಜೆಗಳು
ನಿತ್ಯ ಹಸಿವ ಕೊಂದವರು
ಬಂಧುಗಳು ನನಗವರು
ಇಷ್ಟಮಿತ್ರರು ಅವರೆ
ಮತ್ತೆ ಓಲಗಕೆ
ನಿತ್ಯ ಬರುವವರು ಅವರೆ

ದುಃಖ ದುಮ್ಮಾನಗಳಲಿ
ಬೆಂದು ಬೆಂಡಾದವರು
ಅಕ್ಕರೆಯ ಸಕ್ಕರೆಗೆ
ನಿತ್ಯ ಕಾಯುವವರು

## ನಾನಿಲ್ಲಿ ಸುಖಿ

ನಾನಿಲ್ಲಿ ಸುಖವಾಗಿದ್ದೇನೆ
ಹಸಿರು ನೆಲದ ಬಸಿರಲ್ಲಿ
ಬಿಸಿಲು ತಂಪಿನಲಿ
ದಿನದಿನವೂ ಕಳೆಯುತ್ತಿದ್ದೇನೆ
ಆಸೆಗಳು ಆಳದಂತೆ
ಭಾಷೆಗಳು ಬೀಳದಂತೆ
ಹಾಯಾಗಿ ಬದುಕಿನಲಿ
ತೇಲುತ್ತಿದ್ದೇನೆ
ಕಡುನುಡಿಗಳು ಜಿಹ್ವೆಯಿಂದ
ಜಾರಬಾರದು ಎಂದು
ಬಿಗಿಯಾಗಿ ಹಿಡಿದಿರುವೆ
ಒಡನಾಡಿಯಂತೆ ।
ಹೊಗಳು ಮಾತುಗಳು ನನ್ನ
ಮನವ ತಟ್ಟಬಾರದು ಎಂದು
ಕದವ ಮುಚ್ಚಿಯೆ ನಾನು
ಕುಳಿತುಕೊಂಡಿರುವೆ

# ನನ್ನೂರ ನೆನಪು

ನಾನು ಹೊರಟಿದ್ದೇನೆ ನನ್ನೂರಿಗೆ
ಹಾದಿ ಸವೆದು ಸವೆದು
ಊರ ಸಮೀಪಕ್ಕೆ ಬರುತ್ತಿದ್ದೇನೆ
ಅಲ್ಲೆಷ್ಟು ಸಡಗರವೊ ಸಂಭ್ರಮವೊ
ನನ್ನನ್ನು ಆದರಿಸಲು ಕಾತರವೊ
ಬಿಸಿಲು ಮಳೆ ಚಳಿಗಾಳಿ
ಯಾವುದೂ ಇರಲಿಲ್ಲ ಆ ಊರಿನಲ್ಲಿ
ನಿತ್ಯವೂ ಕೊಂದು ತಿನ್ನುವ ಹಸಿವೆ ಇಲ್ಲ
ಕೊಲೆ, ಮೋಸ, ವಂಚನೆಗಳ ಸುಳಿವೆ ಇಲ್ಲ
ಎಲ್ಲರೂ ಬಂಧುಗಳು ಬಾಂಧವರು ನನಗಲ್ಲಿ
ಬಲ್ಲವರು ಕಷ್ಟಸುಖಗಳನರಿತವರು ಆ ಊರಿನಲ್ಲಿ
ಕಣ್ಣೆತ್ತಿದಷ್ಟೂ ಬೆಟ್ಟಗಳು ಕಾಡುಗಳು
ಚಿಲಿಪಿಲಿಗುಟ್ಟುವ ಪಕ್ಷಿ ಸಂಕುಲವು
ಮಣ್ಣಾಟ ಆಡಿದವರ ನಿತ್ಯ ನೋಟಗಳು
ಕಣ್ಣುಮುಚ್ಚಾಲೆ ಆಡಿದ್ದ ನೆನಪುಗಳ ಕಾಟ
ಹೆಜ್ಜೇನು ಗೂಡುಗಳು, ಗುಬ್ಬಚ್ಚಿ ತಾಣಗಳು
ಇನ್ನೆಷ್ಟೊ ನೆನಪುಗಳು ಕುಕ್ಕುತಿದೆ ಮನವ
ಬಂದು ಸೇರುವೆನಲ್ಲಾ ಎಂಬ ಕಾತರವು
ತಡೆಯಲಾಗದು ವೇಗ ಬಾ ನನ್ನೂರೆ ಬೇಗ

## ಬಾಳನಡಿಗೆ

ಅಡಿಗೆ ಮನೆಯ ಗಡಿಗೆ
ಒಡೆದಿತ್ತು
ಬರಿದು ಆಯಿತು ನನ್ನ ಬಾಳು
ದುಡಿದುಗಳಿಸುವವರಿಲ್ಲದಾಯಿತು
ಬೇಡಿ ತರುವವರಿಲ್ಲದಾಯಿತು
ಬರಿದಾಯಿತು ಬಾಳ ಗಡಿಗೆ ನಡೆಯದಾಯಿತು ಮುಂದಕೆ
ಹಾವು ಕಚ್ಚಿತು ಕೈಯ್ಯನ ಅಯ್ಯೋ
ಚೇಳು ಕುಟುಕಿತು ಮೈಯನು
ಕೂಳು ತಿನ್ನಲು
ಗತಿಯಿಲ್ಲ ಹೇಳಲಾರದ ನೋವಿದು
ನಿತ್ಯದನ್ನವ ಕೊಟ್ಟು ನಮಗೆ
ಸಂತೈಸಿದ ಗಡಿಗೆಯೊಡೆಯಿತು
ಸಂಕಟವ ತಂದಿತ್ತು ಹೋಯಿತು, ಚಿನ್ನದಂತ ಗಡಿಗೆಯು

ೂ

## ಮುಗುಳು ಮಲ್ಲಿಗೆ

ಮುಗುಳು ಮಲ್ಲಿಗೆ
ಅರಳು ಮೆಲ್ಲಗೆ
ಕಂಪ ಬೀರಲು ಲೋಕಕೆ

ಹಸಿರು ಹಾಸಲು ಹೊದ್ದು ಮಲಗಿಹೆ
ಮೊಸರು ಚೆಲ್ಲಿದ ಚೆಲುವಿದೆ

ಗಗನ ಚುಕ್ಕೆಗಳಲ್ಲಿ ಬಂದು
ನಲಿದು ಕುಣಿದ ಭ್ರಮೆಯಿದೆ
ಉಸಿರು ಉಸಿರಿಗೂ ಕಂಪ ಸೂಸುವೆ
ಮನಕೆ ಹರುಷವ ನೀಯುವ
ನಿನ್ನ ಮೊಗದಲಿ ಚೆಲುವು ತುಂಬಿದೆ
ಮನದೊಳಾಸೆಯು ಚಿಗುರಿದೆ
        ದಂಡೆ ಮಾಲೆಗಳಾಗಿ ನೀನು
ಎಲ್ಲ ಗುಡಿಗಳ ಸೇರಿದೆ
ಎಲ್ಲ ಜಡೆಗಳೊಡನಾಡಿಯಾಗಿ
ಹಲವು ಮುಡಿಗಳ ಸೇರಿದೆ
ಒಂದು ದಿನದ ಬಾಳು ನಿನ್ನದು
ಬವಣೆ ಕಾಣದ ಬದುಕದು
ಎಲ್ಲ ಮನಗಳ ಗೆದ್ದುಕೊಂಡ
ಬಾಳು ನಿನ್ನದು ಚಂದವು

## ಹೊಸ ವರುಷ

ಹೊಸ ವರುಷ ಬಂತೆ
ಹರುಷ ಹೊನಲನುತಂತೆ
ನಗುನಗುತ ಬಂತೆ?
ಅಳುತ ನೀಗುವೆನಂತೆ
ಏನಂತೆ ಹೇಗಂತೆ ವರುಷ ಬಂತಂತೆ?
ಬದುಕು ಹಸಿರಾಗಿ
ನಿತ್ಯ ಚೇತನವಾಗಿ

ಹೊಸ ಬಾಳ ಕೊಡಲೆಂದು ಬಂತೆ?
ಇಳೆಯ ನೋವನು ಕಳೆವೆನೆಂದು ಬಂತೆ?
ಓ ಗಳಿಗೆ ಚೇತನದ ಹೊಳೆಯೇ
ಸ್ವಾಗತವು ನಿನಗಿಲ್ಲಿ
ವಧುವಂತೆ ಬಾಇಲ್ಲಿ
ಬಿನ್ನಾಣವ ತೋರುತಿರು
ನಿತ್ಯ ಸುಖ ಸೌಭಾಗ್ಯ ಬೀರು

## ಕಿರುತೊರೆ

ಗಿಡಮರಗಳ ಸಂದಿನಲಿ
ಸರಪರ ಸದ್ದಿನ ತಾಳದಲಿ
ಜುಳುಜುಳು ಹರಿಯಿತು ತೊರೆಯೊಂದು
ಹರಿಯುವ ಹಾವು ತಾನಾಯ್ತು
ಉದುರಿದ ಹೂವು ತೇರಾಯ್ತು
ತರಗೆಲೆ ದೋಣಿಯ ಸಾಲಿತ್ತು
ಸಾಗಿತು ಮುಂದಕೆ ತೊರೆಯಲ್ಲಿ
ಮುಳ್ಳಿನ ಕಲ್ಲಿನ ದಾರಿಯಲಿ
ಮುತ್ತಿನ ಸರಗಳು ಮೂಡಿದುವು
ಬೆಳ್ಳಿಯ ರೇಕುಗಳಾಡಿದವು
ಸಾಗಿತು ಕಿರುತೊರೆ ಮುಂದಕ್ಕೆ
ವೇಗದಿ ಸೇರಿತು ನದಿಯೊಂದಕ್ಕೆ
ನದಿಯಾಳದಲಿ ಕರಗಿತು ತೊರೆಯು
ನೊರೆನೊರೆಯಾಗಿ ಮರೆಯಲ್ಲಿ ।

# ಸಾಗರ

ನೀರ ಮೊಗೆಯಲು ಬಂದೆಯಾ ಸಾಗರಕೆ,
ಇಲ್ಲಿ ನೀರಿಲ್ಲ ಬರೆ ಗುಡ್ಡ ಕಾಡುಗಳು
ಅತ್ತಲೂ ಕಾಡು ಇತ್ತಲೂ ಕಾಡು ಏನದರ ಸೊಬಗು
ಅತ್ತನದಿ ಇತ್ತ ಝುರಿ
ಭೋರ್ಗರೆವ ನದಿ ಜಲಪಾತಗಳು
ಕಣ್ಣಿಗೂ ಹಬ್ಬ, ಕವಿಗಳಿಗೆ ಕಬ್ಬ
ಮನದಣಿಯೆ ನೋಡಿದರೂ
ಸಾಲದೆನ್ನುವ ಹಬ್ಬ
ಎಲ್ಲೆಲ್ಲೂ ಹಸಿರು ತೋರಣ
ಗಿಡಮರಗಳ ಹೂರಣ
ಹಕ್ಕಿಪಕ್ಕಿಗಳ ಚಿಲಿಪಿಯನಾದ
ಕಿರುಮಿಡಿತೆಗಳ ವೃಂದ ಗಾನ
ಹೋಗಬೇಕೊಮ್ಮೆ 'ಸಾಗರ'ಕೆ
ಭೂತಾಯಿಯ ಮಡಿಲ ತಾಣಕ್ಕೆ
ಮೊಗೆಮೊಗೆದು ತರಬೇಕು
ಭೂಮಾತೆಯ ಸಿರಿಯ ಸೊಬಗ
ಅದು ನೀರಿಲ್ಲದ 'ಸಾಗರ'ವು
ಸೌಂದರ್ಯದ ಆಗರವು
ಪ್ರಕೃತಿ ಮಾತೆಯ ಮಮತೆಯ ಮಡಿಲು
'ಸಾಗರ'ಕೆ ಬನ್ನಿ, ನೀರಿಲ್ಲದ ಮಡುವ
ನೋಡ ಬನ್ನಿ

## ಭೀಕರ ಕನಸು

ಅದೊಂದು ಭೀಕರ ಕನಸು
ಸಾಗರ ದಂಡೆಯಲಿ ಚಲಿಸುತ್ತಿದ್ದೆ
ಇದ್ದಕ್ಕಿದಂತೆ ತಿಮಿಂಗಿಲದ ಬಾಯೊಳು ಬಿದ್ದೆ
ಬೆಳಕಿಂಡಿಯಾಗಿತ್ತು ಆ ಬಾಯಿ ನನಗೆ
ಬೆಳಕು ಹರಿದಿತ್ತು ಸಾಗರದ ಒಳಗೆ
ಒಡೆದ ಹಡಗಿನ ಚೂರುಗಳು
ಹಲಬಗೆಯ ಆಮೆಗಳು
ಮುತ್ತು ಹವಳಗಳ ರಾಶಿ
ಸತ್ತವರ ಅಸ್ಥಿ ಪಂಜರ
ಎಲ್ಲವನು ನುಂಗಿತ್ತು, ಶಾಂತವಾಗಿ
ಕಂಡದ್ದೆಲ್ಲಾ ಕನಸೆಂದು ಎಚ್ಚರವಾಗಿ
ಕಣ್ಣು ತೆರೆದು ನೋಡಿಕೊಂಡೆ
ಬೆವತು ಬೆಂಡಾಗಿ

○

## ನನ್ನ ಕೊರಗು

ನಾನು ಕರಗುತ್ತಿದ್ದೇನೆ
ಹಂತ ಹಂತವಾಗಿ
ಬಿಸಿಲಿಗಿಟ್ಟ ಸಕ್ಕರೆಯಂತೆ
ಅರಗಿನ ಗೊಂಬೆಯುಂತೆ
ಬಾಳ ಕೊಂಡಿಗಳೆಲ್ಲಾ

ಕಳಚುತಿವೆ ಒಂದೊಂದಾಗಿ
ಸುತ್ತ ಬಿಗಿದ ಹಗ್ಗವೆಲ್ಲಾ
ಸಡಿಲಾಗುತ್ತಿದೆ ತಾನಾಗಿ
ಕನಸುಗಳು ಕಂತಿ ಹೋದವು ಎಲ್ಲೋ
ಮನಸಿನಲಿ ಇರಬಾರದು ಎಂದೋ ಏನೋ
ಬದುಕಿನಲಿ ಆಸೆಗಳು ಬತ್ತಿ ಹೋಗುತ್ತಿವೆ
ಬಾಳ ಬುತ್ತಿಯು ಬರಿದಾಗುತ್ತಿದೆ.

## ಭಾವ ಜೀವನ

ಭಾವ ಬೀಜಗಳನ್ನೆಲ್ಲಾ
ಎದೆಯಾಳದಲಿ ಬಿತ್ತಿ
ಗಿಡವಾಗಿ, ಮರವಾಗಿ ಬೆಳೆಸಿದ್ದೆ ನಾನು
ಬಗೆಬಗೆಯ ಪುಷ್ಪಗಳು
ಫಲಗಳನು ಕೊಟ್ಟಿತ್ತು
ಕೈಯ್ಯಾರೆ ನಾಕೊಟ್ಟೆ ಮೊಗೆ ಮೊಗೆದು ಅಂದು
ಕಟ್ಟಿಟ್ಟ ಬುತ್ತಿಯನು
ಹಂಚಿ ತಿನ್ನಲು ಕಲಿತೆ
ಉಟ್ಟ ವಸನವ ಕೊಟ್ಟು ಧನ್ಯಳಾದೆ
ಹಸುಗೂಸು ಕೈಗೆತ್ತಿ
ಮುದ್ದು ಮಾಡಲು ಕಲಿತೆ
ಕನಸು ಮನಸಿನಲವರ ಒಳ ಸೇರಿ ಬಿಟ್ಟೆ
ಪಶುಗಳ ಮೈಸವರಿ
ಮುಸುರೆ ನೀರನು ಕೊಟ್ಟೆ

ಹಸಿ ಹುಲ್ಲನರಸಿ ಕರುವಿಗೆ ಕೊಟ್ಟೆ
ಉಸಿರಲ್ಲಿ ಹಸಿರಾದ
ನಿನ್ನ ಕಣಜವ ಕಂಡೆ
ಬದುಕಲ್ಲಿ ಸವಿ ಜೇನ ಸವಿದು ಕೊಂಡೆ ॥

## ಜೀವನದಿ

ಬದುಕು ಸಾವಿನ ನಡುವೆ
ಜುಳು ಜುಳುನೆ ಹರಿಯುತ್ತಿತ್ತು
ಜೀವನದಿ
ಒಮ್ಮೆ ಭೋರ್ಗರೆತ
ಏನೇನೋ ಸೆಳೆತ
ಮತ್ತೊಮ್ಮೆ ಹನಿಹನಿಯಾಗಿ ಹರಿಯುತ್ತಿತ್ತು
ಒಮ್ಮೆ ಆಳಕೆ ಹೊಕ್ಕು
ಮತ್ತೆ ಮೇಲಕೆ ಬಂದು
ಕುಣಿ-ಕುಣಿದು ಕುಪ್ಪಳಿಸಿ ಹಾರುತ್ತಿತ್ತು
ನೊರೆಯಾಗಿ ಹರಿದಿತ್ತು
ಮತ್ತೆ ಸುಳಿಯಲ್ಲಿ ಸುತ್ತುತ್ತಿತ್ತು
ಸಿಕ್ಕಿದ್ದು ಮುಕ್ಕಿತ್ತು
ಬದುಕು ಸಾಗಿತ್ತು
ಕಂಡರಿಯದಾ ತಾಣಕ್ಕೆ
ಅವಳಿ ಜವಳಿಗಳಾಗಿ
ಬದುಕು ಸಾವುಗಳೆರಡು
ಜೀವಿ ಜೀವಿಗಳಿಗೆಲ್ಲಾ ದಾರಿ ತೋರಿತ್ತು.

# ನನ್ನ ಮುದ್ದಿನ ಕಂದ

ನನ್ನ ಮುದ್ದಿನ ಕಂದ
ಮಂದಾರದ ಮೈಯ್ಯವನು
ದಿನದಿನವೂ ಕಾಣುವನು
ಒಂದೊಂದು ತೆರದಲ್ಲಿ
ನಿನ್ನ ಕೆಂಪಿನ ತುಟಿಯು
ಕೆಂದಾವರೆಯ ಎಳೆಯು
ನಿನ್ನ ಬೆರಳುಗಳೆನಗೆ
ಹವಳದಾ ಮಣಿಯು
ನಿನ್ನ ಮುಂಗುರುಳೆನಗೆ
ಕರಿದುಂಬಿ ಸಾಲುಗಳು
ನಿನ್ನ ಕಾಲ್ಗೆಜ್ಜೆಯ ಸದ್ದು
ಝೇಂಕಾರ ಧ್ವನಿಯು
ನನ್ನ ಮಿಂಚುವ ಕಣ್ಣು
ಕೊಳದೊಳಗಿನ ಮೀನು ನಿನ್ನ ಮುದ್ದಿನ ಮೊಗಕೆ
ಚಂದಿರನ ಚೆಲುವು
ಏನು ಹೇಳಲಿ ನಿನಗೆ
ಎಲ್ಲವೂ ಚೆಂದವೆ
ನೀನೆ ಬಂಗಾರ ಸಿಂಗಾರ
ಮುತ್ತಿನಾ ತೋರಣವು ಈ ಬಾಳಿನಲ್ಲಿ

## ಹೆದರಿಕೆ

ನಾನು ಹೆದರುತ್ತೇನೆ
ತೀಕ್ಷ್ಣವಾದ ನೋಟಕ್ಕೆ
ಕಣ್ಣಿನಲಿ ಮೆರೆದಿರುವ
ದ್ವೇಷದ ಭಾವಕ್ಕೆ
ಕೆಂಗಣ್ಣ ನೋಟದಿ
ತೋರುವ ಕ್ರೂರ ಶಾಪಕ್ಕೆ
ಹೃದಯ ಹೀನತೆಗೆ
ಧ್ವನಿಯ ಆಕ್ರೋಶಕ್ಕೆ ತೀಕ್ಷ್ಣತೆಗೆ
ಕಾಡು ಬೆಂಕಿಯ ತೆರದಿ
ಮನವ ಸುಡುವ ಭಾವಕ್ಕೆ
ನಾನು ಹೆದರಿ ಕಂಗಾಲಾಗುತ್ತೇನೆ
ಸುತ್ತಲೂ ಬೇಲಿಯನು
ಬಿಗಿಯುತ್ತೇನೆ ರಕ್ಷಣೆಗಾಗಿ
ಅಲ್ಲಿ ಬದುಕಬೇಕೆಂಬ ಆಸೆಗಾಗಿ

ೲ

## ನನ್ನ ಪಯಣ

ನಾನು ನಡೆಯುತ್ತೇನೆ
ನನ್ನ ಕಾಲುಗಳಿಂದ
ಒಮ್ಮೊಮ್ಮೆ ನೆಲದ ಮೇಲೆ
ಇನ್ನೊಮ್ಮೆ ನೀರಿನಲಿ
ಮತ್ತೊಮ್ಮೆ ಗಾಳಿಯಲಿ

ನಡೆಯುತ್ತಲೇ ಇರುತ್ತೇನೆ ನಿತ್ಯವೂ
ನೆಲದ ಮೇಲೆ ನಡೆಯುವಾಗ
ಪುಷ್ಪರಾಶಿಗಳು ಬಗೆಬಗೆಯ ಬಣ್ಣದಲಿ
ಕಂಪನ್ನು ಬೀರಿ, ಮುದವ ನೀಡುತ್ತವೆ ಮನಕೆ
ಅಲ್ಲಲ್ಲಿ ಮುಳ್ಳುಗಳು
ಗುಡ್ಡ ಕಂದರಗಳು ಬೆಟ್ಟ ಕಾಡುಗಳು
ಸಾಲುಗಟ್ಟಿ ನಿಂತೆನ್ನ ಸ್ವಾಗತಿಸುತ್ತಿವೆ
ಎತ್ತಲೂ ಕತ್ತಲೆ, ಅಲ್ಲಲ್ಲಿ ಬೆತ್ತಲೆ
ಸತ್ತ ಮನುಜರ ಗೋರಿಗಳು ಮತ್ತೆ
ಊಳಿಡುವ ನರಿ ನಾಯಿಗಳು
ಕತ್ತೆತ್ತಿದಾಗ ಸುಂದರ ಬೆಳಕು
ಸೂರ್ಯಚಂದ್ರರ ತುಣುಕು, ಮಿಂಚು
ಮತ್ತು ಮಿರುಗುವ ನಕ್ಷತ್ರಗಳ ರಾಶಿ
ನೀರಿನಲ್ಲಿ ನಡೆದಾಗ ಚಳಿಯಲ್ಲಿ ನಡುಕ
ಮುಳುಗೇಳಿ ಬಂದಾಗ ಹಾಯೆಂಬ ಧ್ವನಿಯು
ನಡುಗಿ ಹಲ್ಲು ಕಡಿಯುತ್ತೇನೆ ನಡುಗುತ್ತೇನೆ ಮತ್ತೆ
ಮುಳುಮುಳುಗಿ ತರುತ್ತೇನೆ
ಬೊಗಸೆ ತುಂಬ ನಿಧಿಯ
ಮುತ್ತುರತ್ನಗಳಲ್ಲಿ ಬರೆ ಮರಳರಾಶಿ
ಗಾಳಿಯಲಿ ತೇಲಾಡಿ ಹಾಯಾಗಿ ಬರುತ್ತೇನೆ
ಕಾಲುಗಳು ಬೇಕಿಲ್ಲ, ನಡೆದಾಡುತ್ತೇನೆ
ಸುತ್ತಲೂ ತುಂಬಿತ್ತು ಬರೆ ಶೂನ್ಯವೊಂದೆ
ನಡೆದಾಡಿ, ಹೋರಾಡಿ ಮತ್ತೆ ಬಂದಿದ್ದೇನೆ
ಬರಿಕೈಯಲ್ಲಿ ಬರಿ ಮೈಯಲ್ಲಿ
ನನ್ನ ತಾಣದಿ ನಾನು ವಿಶ್ರಾಂತಿಯನರಸಿ ।

○

# ದೇವನ ಇರವು

ಎಲ್ಲೂ ದಾರಿಯು ಕಾಣದಾಗ
ನಿನ್ನ ಇರವನು ಕಂಡೆನು
ಮಾತನೊಂದು ನುಡಿಯದೆ
ಎನ್ನ ಎದೆಯನು ಹೊಕ್ಕೆಯ ?
ಕಾಣದಾದ ನೋವಿನಂತೆ
ಕೆಂಡದಡಿಯ ಬೆಂಕಿಯಂತೆ,
ನಿನ್ನ ತಾಣವ ಕಂಡೆನು
ಕುಸುಮಿಸುವ ಶಕ್ತಿ ನೀನು
ಅಂಕುರಿಸುವ ಬೀಜವು
ಜಗದ ಸೃಷ್ಟಿ, ಪ್ರಳಯ ಕೂಡ
ನಿನ್ನ ಬೆರಳಿನ ತುದಿಯಲಿ
ಹರಿವ ನೀರಿನ ಸುಳಿಯ ಮಧ್ಯೆ
ನಿನ್ನ ಕುಣಿತವ ಕಂಡಿಹೆ
ಉರಿವ ಬೆಂಕಿಯ ಮಧ್ಯದಲ್ಲೂ
ನಿನ್ನ ಶಯನವ ನೋಡಿಹೆ
ಬೆಳಕಿನಲ್ಲೂ, ನೆರಳಿನಲ್ಲೂ
ಭೂಮಿಯಲ್ಲೂ, ಬಾನಿನಲ್ಲೂ
ಬದುಕಿನಲ್ಲೂ, ಸಾವಿನಲ್ಲೂ
ನಿನ್ನ ಚಕ್ರವೆ ತಿರುಗಿದೆ
ಬಸಿರಿನಲ್ಲೂ, ಉಸಿರಿನಲ್ಲೂ
ಸುತ್ತು ಬರುವ ದೇವನೆ
ಜನುಮ ಜನುಮಕು ನಮ್ಮನೆಲ್ಲಾ
ಹರುಸುತಿರುವ ದಾತನೆ ॥



# ನನ್ನ ನಡೆ

ನಾನು ಅಲ್ಲಿಗೆ ಬಂದಿದ್ದೇನೆ
ಗಡಿಯಾರದ ಮುಳ್ಳಿನಂತೆ
ನಡೆನಡೆದು ಸಾಕಾಗಿ
ತಿರುಗಿ ನೋಡಿದಾಗ
ನಾನು ಅಲ್ಲಿಗೇ ಬಂದಿದ್ದೇನೆ
ಹೊರಟ ಜಾಗಕ್ಕೆ
ಹೊಸವರುಷಗಳು ಬಂದು ಹೋದವು
ದೀಪಾವಳಿಗಳು ಬೆಳಗಿದವು
ಬಗೆ ಬಗೆಯ ಬದುಕನ್ನ ಬಾಳಿ ಬಂದೆ
ಇಳೆಯ ಸುಖ ದುಃಖಗಳ ಸಹಿಸಿಕೊಂಡೆ
ಎಷ್ಟು ನಡೆದರೂ ದಾರಿ ಸವೆಯಲಿಲ್ಲ
ಬದುಕಿನುದ್ದಕ್ಕೂ ಬವಣೆ ಕಳೆಯಲಿಲ್ಲ
ಎಲ್ಲೋ ಹೋಗಲೆಂದು ಎಲ್ಲಿಗೋ ಹೋಗಿ
ದಾರಿ ಕಾಣದೆ ನಿಂತೆ ಬಟ್ಟ ಬಯಲಿನಲ್ಲಿ
ಅಡ್ಡ ಗೋಡೆಗಳು ಆಳ ಕಂದರಗಳು
ಮುಳ್ಳು ಕಲ್ಲುಗಳೂ ಮುಂದ ಮುಂದಕೆ
ಹಿಂತಿರುಗಿ ಬಂದೆ, ಬಿಟ್ಟ ಜಾಗದಿ ನಿಂತೆ
ಚೇತನವು ಇರಲಿಲ್ಲ ಸಪ್ಪೆಯಾಯಿತು ಬದುಕು
ಮುಂದಡಿಯಿಡಲು ಮನವು ಬಯಸಲಿಲ್ಲ

# ಜ್ಞಾನದಾಹ

ಉಣ್ಣುವ ಚಿಂತೆಯಲಿ
ನಿನ್ನಿರವ ಮರೆತಿದ್ದೆ
ಹಬ್ಬ ಹುಣ್ಣಿಮೆಗಳಲಿ
ತಿಂದು ತೇಗುತಲಿದ್ದೆ

ಎಂದಾದರೊಮ್ಮೊಮ್ಮೆ
ನಿನ್ನ ಧ್ಯಾನಿಸುತಲಿದ್ದೆ
ಭಕ್ತ ನಾನೇ ಎಂದು
ಬಿಂಕದೊಳಿದ್ದೆ
ಒಂದೇ ಭಾವದಿ ನಿನ್ನ
ಭಜಿಸಬೇಕೆಂದರಿಯೇ
ಇಂದೆನ್ನ ಪೊರೆಯೆಂದು
ಬೇಡಿಕೊಂಡೆ

ಇಂದಿಲ್ಲಿ ಬಂದಿಹೆನು
ಭಿಕ್ಷೆಯನು ಬೇಡುವೆನು
ಜ್ಞಾನದಾಹವು ನನಗೆ
ಕರುಣಿಸೆಂದು

ಬಾಗಿಲಿಗೆ ಬಂದಿಹೆನು
ಜೋಳಿಗೆಯ ಹಿಡಿದಿಹೆನು
ಜ್ಞಾನ ಭಿಕ್ಷೆಯ ನೀಡಿ
ಕಾಪಾಡು ತಂದೆ

○

# ಮಲೆನಾಡ ಸೊಗಸು

ಮಲೆನಾಡ ಕಾಡಲಿ
ಹಸಿರು ಹೊದಿಕೆಯ ನಡುವೆ
ಚಳಿಗಾಳಿ ಬೀಸುತ್ತಿತ್ತು
ಮೈ ಮನವ ಕೆಣಕುತ್ತಿತ್ತು

ಕೆಂಪು ಹವಳದ ಹೂವು
ಬಿಳಿಯ ಮುತ್ತಿನ ಮಾಲೆ
ನೆಲಕೆಲ್ಲಾ ಹಾಸು ಹಾಸಿತ್ತು
ಮನಕೆಲ್ಲಾ ಹರುಷ ಬೀರುತಿತ್ತು

ಪಕ್ಷಿಗಣಗಳು ಸೇರಿ ಚಿಲಿಪಿಲಿಯು
ಹಲ ಬಗೆಯ ರಾಗಗಳು
ಹಲವು ಹಾಡುಗಳ ಸೃಷ್ಟಿಸಿತ್ತು
ಬಣ್ಣ ಬಣ್ಣದ ಕುಸುಮಗಳು
ತಲೆ ಎತ್ತಿ ನಿಂತವು
ಭೂಮಿಯಲಿ

ಚಿಟ್ಟೆಗಳು ಕೀಟಗಳು
ಬಟ್ಟಲನು ನೆಕ್ಕಿದವು
ಹನಿಜೇನ ಸವಿದುಂಡು
ನಕ್ಕು ನಲಿದಾಡಿದವು
ಮಾವು ಬೇವುಗಳಲ್ಲಿ ಹೂವು
ಕೋಗಿಲೆಯು ಮರವೇರಿ
ಕೂಗ ಕೊಟ್ಟಿತು ಕೇಳಿ
ಅಂದ ಚಂದದ ನಾಡು
ಮಲೆನಾಡ ಸಿರಿಯು
ಸಂದುಗೊಂದಿಗೂ ಸೊಗಸು
ಹನಿಜೇನ ತಿನಿಸು

# ಬದುಕು

ಬದುಕಲ್ಲವೇ ನಮಗೆ ಬಂಗಾರ
ಬದುಕದಿದ್ದರೆ ಬೇಕೆ ಸಿಂಗಾರ,
ಬದುಕು ಬಾಳಲರಿತವನೆ ಶ್ರೇಷ್ಠ
ಬದುಕಲರಿಯದವನು ಕೆಟ್ಟ

ಮನಸ್ಸಿದ್ದು ಮಾಡಬೇಕು ಸೃಷ್ಟಿ
ಮನಸಾರೆ ಪ್ರೀತಿಯನು ತೋರಬೇಕು
ಮನದಲ್ಲಿ ಮೂಡಿರಲು ಮದಮತ್ಸರ
ಮುನಿಸುಗಳು, ಮೂಢತನಗಳೆ ಉತ್ತರ

ಬದುಕಲರಿಯದವ ಹೇಡಿ
ಬದುಕ ದೂಷಿಸುವವ ರಣಹೇಡಿ
ಬದುಕ ಮರೆಯಲು ಎಂದೆ
ಕುಡಿತ, ಕುಣಿತ ಬಹುವಿಧದ ಮೋಡಿಗಳು

ಬದುಕಲಾರೆವೆಂದು ಮೃಗಪಕ್ಷಿಗಳಲಿಲ್ಲ,
ಶ್ವಾನ ಬದುಕನ್ನು ತಾನೆಂದು ಹಳಿಯಲಿಲ್ಲ
ಪಶುಪಕ್ಷಿ ಪ್ರಾಣಿಗಳಲಿ ಯಾವುದಿದೆ ನೋಡಿ
ಬದುಕು ಬೇಡವೆಂಬ ಗೋಳಾಟ ಹೊಯ್ಯುವರು

ಬದುಕಬೇಕು ನಾವಿಲ್ಲಿ ಹದವಾಗಬೇಕು
ಬವಣೆ ಬೇಗುದಿಗಳೆಲ್ಲಾ ಸುಡಬೇಕು
ಕನಸು ನನಸುಗಳೆಲ್ಲಾ ಭಸ್ಮವಾಗಬೇಕು
ಮನ ಕಾರ್ಯಗಳಿಗಾಗಿ ಮೀಸಲಿಡಬೇಕು

ಬಾಳಿನಲಿ ಬಂದದ್ದು ದೊರಕಿದ್ದು ನಮಗೆ

ಉಂಡದ್ದು ಉಟ್ಟದ್ದು ನಮ್ಮ ಪಾಲಿನದು
ಕಂಡಕಂಡವರನ್ನು ಹೀಗ್ಳೈವದೇಕೆ?
ಸಮಯ ಬಂದಾಗ ನಾವೆಲ್ಲ ಹಾವೆಂಬೆವಲ್ಲಾ

ನನ್ನದೆಂಬುದೆ ಇಲ್ಲ ನಾನೇ ಇಲ್ಲ
ನಾವೆಲ್ಲ ಬಂದದ್ದು ಈ ಜಗಕ್ಕೆ ಗಳಿಗೆಗಾಗಿ
ಜಗವು ನಮ್ಮದಲ್ಲ, ಜನರೂ ನಮಗಿಲ್ಲ
ಗಳಿಗೆ ನಿಮಿಷಗಳೆಣಿಕೆ ಮಾಡಬೇಕು

## ಆಸೆಗಳು

ಆಸೆಗಳು ಕಮರುತಿವೆ ಒಂದೊಂದು ದಿನಕೆ!
ಮುದುಡಿ ಬಾಡುತಿವೆ, ನೆಲಕುರುಳಿ ಬೀಳುತ್ತಿವೆ.
ತೆರೆಯಂತೆ, ನೊರೆಯಾಗಿ ಮೇಲಕ್ಕೆ ಬಂತು
ರಭಸದಲಿ ದಡವನ್ನೆ ಅಪ್ಪಳಿಸಿತು
ಆಸೆ, ಆಕಾಂಕ್ಷೆಗಳು ಜೀವನದ ಉಸಿರು
ಉರುಳಿ ಬಿದ್ದಾಗಲೆಲ್ಲ ಬರೆ ಮರಳಗಾಡು
ಆಸೆಯಿದ್ದರೆ ಬದುಕು ಚಿಗುರ ಕೊಟ್ಟೀತು
ಅರ್ಥವನ್ನು ಅರಸುತ್ತ ಕಾಲವನು ದೂಡಿತು.
ಎಷ್ಟೆಷ್ಟೋ ಆಸೆಗಳು ಗೋಪುರವ ಕಟ್ಟಿತು
ಏರಲಾಗದೆ ಜನುಮ ನೆಲವ ಕಚ್ಚಿತು
ಇನ್ನೇಕೆ ಚಿಂತಿಸಲಿ, ಮುಂದೇ ವಂಚಿಸಲಿ
ಸತ್ಯಲೋಕದಿ ನಡೆಸು ಬಾಳದೋಣಿ
ವಯಸ್ಸಿದ್ದರೆ ಮನಸ್ಸು ಹುಮ್ಮನಸ್ಸು
ವಯಸ್ಸಾದಂತೆ ಜೀವನವೆ ಕನಸು
ಆಸೆಗಳ ಬಿಡಬೇಕು, ಕೊಡಬೇಕು
ಬದುಕಿದ್ದೇ ಬಾಳೆಂಬ ತೃಪ್ತಿಯಿರಬೇಕು

# ಭಾವನೆಗಳು

ತಂಗಾಳಿ ಬೀಸಿದಾಗ, ಕಂಪಲರು ಸೂಸಿದಾಗ
ಮನದಲ್ಲಿ ಭಾವನೆಯ ತೆರೆಗಳೆದ್ದುವು
ಸಾಗರದ ಭೋರ್ಗರೆತ ತಾನಾಗಿ ನಿಂತಿರಲು
ಸಾಲು ಸಾಲುಗಳಾಗಿ ತೆರೆಗಪ್ಪಳಿಸಿದುವು
ಕುಪ್ಪಳಿಸಿ, ಕುಣಿದುವು ಹೂವಾಗಿ ಅರಳಿದವು
ಹಾವಂತೆ ಹರಿದಾಡತೊಡಗಿದವು

ಕೋಗಿಲೆಯು ಕೂಗಿನಲಿ ಮನ ಗೆದ್ದಿತು
ಕಾಗೆಯ ಕೂಗಿಗೆ ಬೆಳಕಾಯಿತು
ಅಂಬಾ' ಅನ್ನುವ ಕರುವಿನ ಧ್ವನಿ ಕೇಳಿ
ಹಸುವಿನ ಕೆಚ್ಚಲಲಿ ಹಾಲುಕ್ಕಿತು

ಸೃಷ್ಟಿಯ ಸೊಗಸೆಲ್ಲ ನೋಡುವ ದೃಷ್ಟಿಯಲಿ
ಹೊಸತನ ಹುಮ್ಮನಸ್ಸು ಕಾರ್ಯದಲ್ಲಿ
ಚೆನ್ನವಲ್ಲವೆ, ಚಂದ್ರ ಸೂರ್ಯರ ಬೆಳಕು
ಬಿನ್ನಾಣದ ಬಿಲ್ಲು, ನಕ್ಷತ್ರ ದೀಪಗಳು
ಬಾನ ಬೆಳದಿಂಗಳು ಬುವಿಗೆ ಹಾಲನು ಚೆಲ್ಲಿ
ಹಚ್ಚ ಹಸಿರಿನ ತೊಡುಗೆ ನೆನೆದೋಯಿತು
ವನದಲ್ಲಿ ಕೇಕೆಗಳು, ಚಿಲಿಪಿಲಿ ರಾಗಗಳು
ಮೋಡಕ್ಕೆ ಮುತ್ತನಿಟ್ಟವು ಗಿರಿ ಶಿಖರಗಳು

ಧಾರೆಧಾರೆಯಾಗಿ ಮಳೆ ಹನಿಸಿದಾಗ
ಭೂತಾಯಿ ಮಡಿಲಲ್ಲಿ ಮೊಗೆದಿಟ್ಟಳು
ನದಿಯಾಗಿ ಹರಿದಾಡಿ, ಅಲ್ಲಲ್ಲಿ ಕುಣಿದಾಡಿ
ಸಾಗರದ ಸೆರಗಿನಲಿ ಮರೆಯಾದವು.

ಮೋಡಗಳಲಿ ತುಂಬಿರುವೆ ಚಿತ್ತಾರ ಬಣ್ಣಗಳು
ಗಿಡಗಳಲಿ ಕಾಣುತಿವೆ ನೂರೆಂಟು ಹೂವುಗಳು
ಎಲ್ಲ ಸುಂದರವಿಲ್ಲಿ, ಎಣಿಯಿಲ್ಲದ ರಾಶಿ!
ಉಕ್ಕಿ ಹರಿಯುತಿದೆ ರಾಶಿಭಾವಗಳು ಭಾಷೆಯಾಗಿ

O

# ಕಾಡುವುದೇಕೆ ದೇವನನು

ಕಾಡುವುದೇಕಪ್ಪಾ ಈ ಜನರು ದೇವನನು
ಕೊಟ್ಟನಲ್ಲವೇ ಅವನು ಬೇಕಾದುದನು
ಎಲ್ಲರಿಗೂ ಎಲ್ಲವನು ಕೊಡು ಎಂದು ಬೇಡಿದರೆ
ಎಲ್ಲಿಂದ ತಂದಾನು ಅವನಾದರೂ ಮುಂದೆ

ಸಾಕು ಅನಬೇಕು ಬದುಕಿನಲಿ
'ಬೇಕು' ಎನುವುದೆ ಭಿಕ್ಷೆ,
ಬಾಯಾರಿದವನಿಗೆ ಬೇಕಾದುದು
ಹನಿನೀರು, ಜೇನುಹನಿಯಲ್ಲವಲ್ಲ!
ಐಶ್ವರ್ಯ ಬೇಕೆಂದು ಕೊಟ್ಟಾಗ
ಕೊಟ್ಟುದನು ಕುಡಿದು ಕುಣಿದು,
ವಿದ್ಯೆ ಬುದ್ಧಿಯನಿತ್ತರೂ ಬಿಡಲಿಲ್ಲ
ನಿನ್ನ ನೀಚಬುದ್ಧಿಯನು ಕಿಂಮತಿಯನ್ನು
ಮಕ್ಕಳ ಕೊಡೆಂಬುದು, ಸುಮಂಗಳೆ ಮಾಡೆಂದು
ಹಲವಾರು ಹರಕೆಯ ಹೊರುವುದು ಮರವ ಸುತ್ತುವುದು
ಯಾತಕೀ ಯಾತನೆಗಳೋ ದೇವಾ, ನೀವಲ್ಲವೇ ಎಲ್ಲಾ
ತಿಳಿದಿಲ್ಲವೇ ನಿನಗೆ ಯಾರಿಗೇನು ಕೊಡಬೇಕೆಂದು

ನ್ಯಾಯಕಾಗಿ ಹೋರಾಡುವರು, ಧರ್ಮದುದ್ಧಾರಕರು
ಸತ್ಯಕಾಗಿ ಕಾಯುವವರು, ನೀತಿನಿಯಮ ಹೇಳುವರು
ಮರೆತರು ನಿನ್ನ ಲೀಲೆ, ಚಮತ್ಕಾರಗಳ ಮಾಲೆ
ಎಲ್ಲವೂ ನೀನಾದಾಗ, ಕಳ್ಳಪೋಕರಿಗಳ ಸೃಷ್ಟಿ
ಸುಳ್ಳು ಮೂಳಿಗಳವೆಲ್ಲ ನೀನು ರುದ್ರಾವತಾರಿ!
ಕಷ್ಟದಲಿ ಕಣ್ಣೀರ ಸುರಿಸಿ, ಸುಖದಲ್ಲಿ ನಿನ್ನನೆ ಮರೆತು
ಕೊಲ್ಲುವರೋ ಜನರೆಲ್ಲ ನಿನ್ನ ಸೃಷ್ಟಿ ನಿಯಮಗಳ
ಹರಿಯೆಂದರೆ ನೀನು ಹರನೆಂಬುವನಿಲ್ಲವೆಂದು
ಗುದ್ದಾಡುವರಲ್ಲಾ ಈ ನಿನ್ನ ಮನುಜಕುಲ

ಸಕಲ ಜೀವಿಗಳ ಜೀವರೇ ನೀನು
'ಸೃಷ್ಟಿಲಯ'ವೆಂಬುದು ನಿನ್ನ ಕಾಲದೃಷ್ಟಿ
ತೃಪ್ತಿ ಕಾಣದೆ ಜೀವ, ಹೆಣಗಾಡುವರಲ್ಲ
ಮರೆತು ಮೆರೆದಾಡುವರಿಲ್ಲಿ ಸರ್ವಸ್ವವೆಂದು.
ಬದುಕ ನೀ ಕೊಟ್ಟೆ, ಉಣ್ಣಲನ್ನವ ಕೊಟ್ಟೆ
ಚಿಂತಿಸಲು ಏಕಿಂತು ಮನವ ಕೊಟ್ಟೆ
ನಿನ್ನ ಸೃಷ್ಟಿ ನಾವೆಲ್ಲ, ನಿನ್ನ ದೃಷ್ಟಿ ನಮಗೆಲ್ಲಾ
ಸಾಕಾದಾಗ ನಮಗಿಲ್ಲಿ ಹೊರಬರುವೆವಲ್ಲಾ

○

## ಆಸರೆ

ಹೊರಗೆ ನಿಂತ ಆ ಲತೆಯು
ಕತ್ತೆತ್ತಿ ಅತ್ತಿತ್ತ ನೋಡಿಕೊಂಡಿತು
ಪಕ್ಕಕ್ಕಿದ್ದ ಕಿರು ಗಿಡವನ್ನು ನೋಡಿ
ತಬ್ಬಿಕೋ ನನ್ನ ಎಂದು ಕೈ ಎತ್ತಿತ್ತು
ಈ ಗಾಳಿಯನ್ನು ಸಹಿಸಲಾರೆ,
ಈ ಚಳಿಯಲ್ಲಿ ನಡುಗಿ ಹೋದೆ,
ಎತ್ತಿಕೋ ತನ್ನನೆಂದು ಗೋಗರೆಯಿತು.

ಗಿಡಕ್ಕೋ ಮರುಕ, ಬಡಪಾಯಿ
ಬದುಕಿಕೋ, ನನ್ನ ಬಳಸಿಕೋ
ಎಂದು ಕರೆಯ ನೀಡಿತು.
ಸೊಕ್ಕಿ ನಿಂತ ಲತೆಗೆ ಅಷ್ಟೇ ಸಾಕು
ಗಿಡವನ್ನು ಬಾಚಿ ತಬ್ಬಿತು
ಶತ ಕೈಗಳಿಂದ, ಮಂದನಿಟ್ಟಿತು.
ಒಡಲ ಬಿಗಿಯಿತು, ಬಳುಕು ದೇಹದಿಂದ
ಹಲವಾರು ತಲೆಗಳಲಿ ಚಿಗುರೊಡೆಯಿತು
ಕೊಂಬೆ ರೆಂಬೆಗಳನ್ನೂ ಬಿಗಿಹಿಡಿಯಿತು,
ಮುತ್ತನಿಕ್ಕಿ, ಗಿಡಕ್ಕೆ ಮತ್ತು ಬರಿಸಿತು,
ತಾನು ಬೆಳೆದು ಹಂದರವಾಗಿ ಮೇಲಕೇರಿತು
ಚಂದದ ಹೂಗೊಂಚಲ ಕೊಟ್ಟಿತು,
ಬಗೆಬಗೆಯ ಹಣ್ಣನೂ ಕೊಟ್ಟಿತು
ಪಾಪ! ಗಿಡ ಮೈ ಭಾರದಲಿ ನಡುಗಿತು,
ದಿನದಿನವೂ ಸೊರಗಿ, ಕಡ್ಡಿಯಾಯಿತು,
ಹಣ್ಣಿಲ್ಲದೆ, ಹೂವಿಲ್ಲದೆ ಬರಡಾಯಿತು
ಪಾಪ! ಗಿಡ ದಿಕ್ಕಿಲ್ಲವಲ್ಲಾ
ಬದುಕಿಕೊಳ್ಳಲಿ, ತನ್ನಾಸರೆಯಲಿ
ಎಂದು ಲತೆಯು, ಹಿಗ್ಗಿತು, ಕುಣಿಯಿತು
ಮನದಲ್ಲಿಯೇ ಉಸಿರ ಹಿಡಿದು ನಕ್ಕಿತು.

## ಅರ್ಥ – ಅಪಾರ್ಥ

ನಾನು ಹೇಳಿದ್ದನ್ನು
ನೀನು ಅರ್ಥಮಾಡಿಕೊಳ್ಳಲಿಲ್ಲ
ನಿನಗೆ ಅರ್ಥವಾಗುವಂತಹ
ಶಬ್ದಗಳನ್ನು ನಾನೂ ಬಳಸಲಿಲ್ಲ
ಅರ್ಥಮಾಡಿಕೊಳ್ಳಬೇಕೆಂಬ
ಇಚ್ಛೆಯೂ ನಿನಗಿರಲಿಲ್ಲ,

ಅದಕ್ಕೆ ನಿನಗೆ ಅಪಾರ್ಥ ಕಲ್ಪನೆಯಾಯ್ತು
ಮುಂದಕ್ಕೆ ನನಗೂ ನಿನಗೂ
ಜಗಳ ತಂದಿತ್ತು, ಮಾತು ಮುರಿದಿತ್ತು
ಕ್ರೋಧ, ಆಕ್ರೋಶದಲಿ
ಮನವ ಕೆಡಿಸಿತ್ತು
ಮನಸ್ಸು ಮನಸ್ಸಿನ ನಡುಕೆಯಲಿ
ಬಿರುಕು ಬಿಟ್ಟಿತ್ತು
ಅದೇ ಆಳವಾಗಿ
ಕಂದಕವಾಯಿತು,
ಅದರ ದಾಟುವ ಶಕ್ತಿಯಿಲ್ಲದೆ
ನಾನೂ ನೀನೂ ಕೊರಗುತ್ತಿದ್ದೇವೆ
ಜೀವನದ ಅಂತ್ಯವನ್ನು
ದುಃಖದಲ್ಲಿ ಕಳೆಯುತ್ತಿದ್ದೇವೆ
ಸತ್ತರೂ ಸವೆಯದ ದ್ವೇಷವನು
ಗೋರಿಗೂ ಒಯ್ಯುತ್ತಿದ್ದೇವೆ
ಅಲ್ಲೆ ಮಣ್ಣು ಮಾಡುತ್ತೇವೆಯೇ
ಮುಂದೊಯ್ಯುತ್ತೇವೆಯೇ
ನೋಡಬೇಕು, ಅಂತರಾಳದಲ್ಲಿ
ಹುಗಿದು ಚಿಗುರಿಸುತ್ತೆವೆಯೇ
ಯಾರು ತಿಳಿಸಬೇಕು.

## ಏನಿದ್ದರೆ ಚೆನ್ನ

ಕಣ್ಣು ಕಾಣದಿದ್ದಾಗ
ಕುರುಡರೆಂದು ಕನವರಿಸುತ್ತೇವೆ
ಕಣ್ಣಿದ್ದಾಗಲೂ ಹಲವಾರು ಬಾರಿ
ಕುರುಡರಾಗಿ ಬಾಳುತ್ತೇವೆ
ಕಣ್ಣು ತೆರೆಯದಿರುತ್ತೇವೆ

ಕತ್ತಲೆಗಾಗಿ ಮರುಗುತ್ತೇವೆ
ಬೆಳಕಿಗಾಗಿ ಹಂಬಲಿಸುತ್ತೇವೆ

ಕಿವಿ ಕೇಳದಿದ್ದಾಗ
ಕಿವುಡರಾಗಿ ಬದುಕುತ್ತೇವೆ
ಕಿವಿ ಕೇಳಿಸುವಾಗ
ಒಲ್ಲದ ಮಾತನ್ನು ಕೇಳಿ
ದಾರಿ ತಪ್ಪುತ್ತೇವೆ, ಜಗಳವಾಡುತ್ತೇವೆ

ಬಾಯಿ ಬಾರದಾಗ
'ಮೂಕ'ರಾಗುತ್ತೇವೆ
ಮಾತು ಬಂದಾಗ
ಹೊಲಸು ಮಾತನಾಡಿ
ನಮ್ಮದೇ ನೆಲೆ ಬೆಲೆ ಕಳೆದುಕೊಳ್ಳುತ್ತೇವೆ

ಸತ್ಯ ನುಡಿಯಲು
ಅಂಜಿ ಹಿಂಜರಿಯುತ್ತೇವೆ
ಮಿಥ್ಯ ನುಡಿದು, ನಿರಪರಾಧಿಗಳ
ಹಲವರನ್ನು ಗಲ್ಲಿಗೇರಿಸುತ್ತೇವೆ

ಕೈಯಿದ್ದರೆ ಕಟ್ಟಿಗೆ
ಹಿಡಿದು ಹೊಡೆಯುತ್ತೇವೆ
ಮೈಯಿದ್ದಾಗ ಯೌವನದಲ್ಲಿ
ಮೈಮಾರಿ ಬದುಕುತ್ತೇವೆ

ಕಾಲಿನಲ್ಲಿ ಬಡಿಯಲು
ಕಲಿತಿರುತ್ತೇವೆ
ತಲೆಯಲ್ಲಿ ದುರಾಲೋಚನೆಗಳ
ತುಂಬಿರುತ್ತೇವೆ

ನಮಗೇನಿದ್ದರೆ ಚೆನ್ನ
ಏನಿಲ್ಲದಿದ್ದರೇನು
ವಿವೇಚನೆ, ಅಂತಃಕರಣವಿದ್ದರೆ
ಎಂತಾದರೂ ಬದುಕಿ ಬಾಳಬಹುದು
ನಿತ್ಯ ಹಂಬಲಗಳನ್ನು
ಬಿಟ್ಟು ಸುಖವಾಗಬಹುದು.

○

## ವೇದನೆ

ಹೃದಯ ಭಾರವಾಗಿತ್ತು
ಎತ್ತಲಾರದಷ್ಟು, ಹೊರಲಾರದಷ್ಟು
ಒಳಗೆ ನೋವೇ ತುಂಬಿತ್ತು
ಹೇಳಲಾರದಷ್ಟು, ಕೇಳಬಾರದಷ್ಟು
ಒಳಗೆ ಸಿಕ್ಕಿ ಕೊಂಡಿತ್ತು.
ಕೈಚಾಚಿ ಜಗ್ಗಿದರೂ ಹೊರಬಾರದಿತ್ತು
ಎದೆಯಲ್ಲಿ ಬೇಗುದಿಯು
ಹೆಪ್ಪುಗಟ್ಟಿತ್ತು ಕಲ್ಲಿನಂತಿತ್ತು
ಕಣ್ಣು ತೆರದಿಟ್ಟಾಗಲೂ ಮನವು ಶೂನ್ಯವೆನಿಸಿತ್ತು.
ಕತ್ತೆತ್ತಿದಾಗಲು ಕಾಣದೆ ಕುರುಡಾಗಿತ್ತು
ಹೊರಗೆಲ್ಲಾ ಅಲೆದಾಡಿ, ಮನವು ಬರುತಿತ್ತು
ಸುಸ್ತಾಗಿ ಮತ್ತೊಮ್ಮೆ ಒಳಸೇರುತಿತ್ತು
ಮೂಕಮನ ಹಲವಾರು ಮಾತುಗಳ ಜಪಿಸಿತ್ತು
ಹೊರಬಾರದೆ ಒಳಗೆ ಚಡಪಡಿಸುತಿತ್ತು
ಕೊನೆಗೊಮ್ಮೆ ಎದೆ ಕರಗಿ ನೀರಾಗಿ ಹನಿಯಿತು
ಕಣ್ಣೀರ ಧಾರೆಯಲಿ ನದಿಯಾಗಿ ಬಂತು
ನದಿಯುಬ್ಬರದಿ ಅಬ್ಬರದಿ ತಾ ಹರಿಯತೊಡಗಿ
ಶಾಂತವಾಯಿತು ಮನವು ದುಗುಡವನು ತೊರೆದು.

○

# ಅದೃಶ್ಯ ಮರಣ

ಎಲ್ಲರಂತೆ ಅವನೂ ನಿಂತಿದ್ದ
ಎಲ್ಲರೊಡನೆ ಅವನೂ ಓಡುತಿದ್ದ
ಹಿಡಿದು ಬಿಟ್ಟರು ಅವನನ್ನು
'ಕೋಳ' ತೊಡಿಸಿದರು ಕೈಗಳಿಗೆ
ಜೀಪಿಗೇರಿಸಿದರು ಠಾಣೆಗೊಯ್ದರು
ನಾಲ್ಕು ಬಿಗಿದರು ಬಾಯ್ಬಿಡಿಸಿದರು
"ಬಿಡು ಬಾಯಿ, ಬೋಳಿಮಗನೆ"
ಯಾಕೆ ಕೊಂದೆ, ಯಾರವನು?
ಒಳಜಗಳವೇ; ಪ್ರೇಮ ಕಲಹವೇ?
"ಗೊತ್ತಿಲ್ಲಾ ಸಾರ್, ದಮ್ಮಯ್ಯಾ
ಹೊಡೆಯಬೇಡಿ ನನ್ನನ್ನು
ಅವನಾರೆಂದು ನೋಡುತ್ತಿದ್ದೆ,
ಎಲ್ಲರೊಡನೆ ಓಡಿಬರುತ್ತಿದ್ದೆ"
ದಮ್ಮಯ್ಯಾ ಬಿಟ್ಟುಬಿಡಿ ಕಿರುಚಾಡಿದ.
"ಗೊತ್ತು ಮಾಡುತ್ತೇನೆ ನಿನಗೀಗ
ಗಮ್ಮತ್ತಿನಲ್ಲಿ ಕಕ್ಕಿಸುತ್ತೇವೆ ನಿನ್ನಿಂದ
ಒದ್ದು ಬಿಡಿರೋ ಮರ್ಮಕ್ಕೆ
ಬಾಯಿ ಬಿಡುತ್ತಾನೆ ಸೂಳೆಮಗ"
ಒದ್ದರು ಮರ್ಮಕ್ಕೆ, ಗುದ್ದಿದರು
ಜುಟ್ಟು ಹಿಡಿದು ನೆಲದ ಮೇಲೆ ಎಳೆದೇಬಿಟ್ಟರು,
ಅವನು ಬಾಯಿ ಬಿಟ್ಟೇಬಿಟ್ಟ
ಆದರೆ ಮುಚ್ಚಲೇ ಇಲ್ಲಿ ಕೊನೆಯವರೆಗೂ,
ಸತ್ತನ್ನೋ ನೋಡು ಉಸಿರಿಲ್ಲವಲ್ಲಾ
ಕೆಟ್ಟಜಾತಿಯ ಮಕ್ಕಳು
ಕೊನೆಗೂ ಕೈಕೊಟ್ಟೇ ಬಿಟ್ಟ
ಕೆಟ್ಟ ಹೆಸರು ನಮಗೆ ಬೇಗ ಕಟ್ಟಿರಿ

ಗೋಣಿಚೀಲಕೆ ತುಂಬಿ ಬಾಯಿ ಕಟ್ಟಿ
ಭಾರಕ್ಕೆ ಕಲ್ಲು ಕಟ್ಟಿ ನದಿಗೆಸೆಯಿರಿ
ಒಂದು ಜೀವಿಯ ಕತೆ ಮುಗಿದೆ ಹೋಯ್ತು

ಅವನಾರೋ ಗೊತ್ತಿಲ್ಲ ಹೆಸರು ಕೇಳಿಲ್ಲ
ಪೋಲೀಸು ಠಾಣೆಯಲಿ ಗುಲ್ಲೆ ಇರಲಿಲ್ಲ
ಎಲ್ಲವೂ ಶಾಂತ, ನಿಸ್ಸಂದೇಹವಾಗಿತ್ತು
ಒಂದು ಜೀವದ ವ್ಯಥೆಗೆ ಸಾಕ್ಷಿಯೇನಿತ್ತು?

○

## ಕವಿ

ಕವಿಯನ್ನು ಕಾಡಿನೆಡೆ ಬಿಡಬೇಕು
ನಾಡಿಗೆಂದೂ ಬರಬೇಡವೆನಬೇಕು

ಕಾಡಿನ ಮೃಗಗಳವನಿಗೆ ಕಾಂಚಾಣರತ್ನ
ಕಾಡವೃಕ್ಷಗಳೆ ಮನೆ ಮಠಗಳು
ಪಕ್ಷಿಗಳ ಚಿಲಿಪಿಲಿಗಳೆ ಶೃಂಗಾರನಾದ
ಬಣ್ಣ ಬಣ್ಣದ ಹೂವುಗಳು ನವರತ್ನಮಾಲೆ,
ಹಸಿರೆಲೆಯ ಮಧ್ಯದಲಿ ಹೊಂಬೆಳಕು ಕಿರಣ
ಉಸಿರಾಟಕದುವೆ ಸಾಕು ಹೊನ್ನ ಬಣ್ಣ

ಹಣ್ಣುಹಂಪಲುಗಳವಗೆ ತಿಂದುಟ್ಟು ತೇಗಲಿಕ್ಕೆ,
ಗಿರಿತೊರೆಯ ತೀರುಗಳೆ ಬಾಯಾರಿಕೆಗೆ
ಸಂಧ್ಯಾವಂದನೆಗಳವಗೆ ನೇಸರನ ಕಿರಣ
ಹಾಯಾಗಿ ನಿದ್ರಿಸಲು ಪರ್ಣಹಾಸಿಗೆಯು.

ಕಂಡುದನು ಬರೆಯುವನು ಬಣ್ಣಬಣ್ಣಗಳಲ್ಲಿ
ಬಂಡುಕೋರನಂತೆ ಅಲೆಯುತಲಲ್ಲಿ
ಭ್ರಮಣೆಯಲಿ ಜೀವನವ ಹರಿಸುತ್ತಲಿ
ಚೇತನವ ತುಂಬುವನು ಜಗಕೆಲ್ಲ ತಾನು

ನಿಡಿದಾಗ ಅವನುಸಿರು ಸದಾ ಹಸಿರು
ಝೇಂಕರಿಸುವ ತುಂಬಿಗಳವನ ಕಿಂಕರರು
ಬಂಗಾರಕಿಲ್ಲದ ಬೆಲೆ ಸಿಂಗಾರಕ್ಕಿದೆಯೆಂದ
ಬಿರುದು ಬಾವಲಿಗಳವಗೆ ಬಿಡಧ ವೈರಿ
ಇರಲಲ್ಲಿ ಕಾಡಲ್ಲಿ ಸುಖ ಸಾಗರದಲ್ಲಿ
ಅಲೆಯುತ್ತ ನಲಿಯಲಿ ಪ್ರಕೃತಿಯಾಸರೆಯಲ್ಲಿ

ಕವಿಯ ಕಣ್ಣು ಕುರುಡಲ್ಲ ತೆರೆದ ಕಣ್ಣು
ಕವಿಮಾತು ಹಿತವಲ್ಲ ಕಟುಸತ್ಯವಾದಿ
ಕವಿ ಕಾಡಿನಲ್ಲಿದ್ದರೇ ಚೆನ್ನ ನಾಡೇತಕ್ಕೆ
ಕಾಡಿಗೂ ನಾಡಿಗೂ ಕಟ್ಟುವನು ಸೇತುವೆ.

ಹೆಸರಿಲ್ಲದ ಹೂವುಗಳು ಹಕ್ಕಿಪಕ್ಕಿಗಳಿಲ್ಲಿ
ಹೆಸರಿಡದ ಮರಗಳಲಿ ಕುಣಿಯುವವು
ಬರಿ ಗಾಳಿಯಲಿ ಬದುಕಿ, ಬರಿ ನೀರ ಕುಡಿದು



# ಪುಟ್ಟ ಹಕ್ಕಿ

ಬಣ್ಣ ಬಣ್ಣದ ಹಕ್ಕಿಯೆ ನಾನು
ಉಣ್ಣಿಸಲಾರೆನು ಆನಂದ!
ಕೊಕ್ಕನು ತಿರುವುತ, ಕಣ್ಣಲ್ಲಿ
ಮಿಂಚು ಕಾಣುವೆ ಚಂದವೆ ನನಗೆಲ್ಲಾ

ಕೊಕ್ಕನು ಕಂಡರೆ
ಕಚ್ಚುವ ಬಯಕೆ,
ಕಣ್ಣಿಗೆ ಕಾಡಿಗೆ ಮೆತ್ತುವೆನು
ನುಣ್ಣನೆ ದೇಹವನೊರಸುವೆನು
ಮೆಲ್ಲಗೆ ಕಾಲನು ಹಿಡಿಯುವೆನು

ಮರದಿಂ ಮರಕೆ ಹಾರುತಲಿವೆ,
ಕೊರಳೊಳು ಧ್ವನಿಯನು ಮಾಡುತಲಿ
ಹೂವನು ಹಣ್ಣನು ಕುಕ್ಕುತಲಿರುವೆ
ಚಂದಿರನಂತೆ ತೋರುವೆ ನನಗೆ

ಹರುಷದಿ ಉಲಿಯುವೆ ನಾನದ ಕಲಿಯುವೆ
ನಿನ್ನಯ ಗಾನಕೆ ನಾನೇ ಕುಣಿಯುವೆ
ವರುಷಗಳಾದರೂ ನಾನೇನರಿಯೆ!
ಬನದಲಿ ಸುತ್ತಲು ಬಂದೇ ಬರುವೆ

ನಿನ್ನಯ ಗರಿಯೋ ಬಣ್ಣದ ಬುಗರಿ!
ನಿನ್ನಯ ನಡೆಗೆ ಚಿಗರೆಯದು ಗುರಿಯು
ನೀನೇ ನನ್ನ ಬಾಳಿನ ಉಸಿರು
ಕಾಡಿನಲೆಲ್ಲಾ ತುಂಬಿದೆ ಹಸಿರು

ಪುಟ್ಟ ಹಕ್ಕಿ ಬಾರೆಲೆ ಬಳಿಗೆ
ಪಕ್ಕದಲ್ಲಿ ಕುಳಿತಿರು ನನಗೆ
ಸೊಕ್ಕಿನಲ್ಲಿ ಹಾರಲುಬೇಡ
ಕಂದ ನಾನು ಮರೆಯಬೇಡ

ಕಾಳನು ಕೊಡುವೆ, ಜೋಳವ ಕೊಡುವೆ
ಹಣ್ಣನು ಕೊಡುವೆ, ಕಣ್ಣನಿಡುವೆ
ಬಾರೆ ನನ್ನ ಚೆಲುವಿನ ಹಕ್ಕಿ
ಚಂದದ ಅಂದದ ಚೆಲುವಿನ ಹಕ್ಕಿ.

## ಬೆಳಕು

ಗಾಢವಾಗಿಹ ತಿಮಿರವೆಲ್ಲೆಡೆಯು ಪಸರಿಸಲು
ನಾ ಕಂಡೆ ಬೆಳಕೊಂದ ಜ್ಯೋತಿಯಾಗಿ
ಕತ್ತಲೆಯ ತಾ ಬೆಳಗಿ, ಸುತ್ತಮುತ್ತಲು ಸರಿಸಿ
ದಾರಿ ದೀಪವು ನನಗೆ ಹೆಜ್ಜೆ ಮುಂದಡಿಗೆ

ಭವ ಬೇನೆಯಲಿ ಬೆಂದು ಬಸವಳಿದು ನಿಂದಾಗ
ಬಾರೆಂದು ಕರೆದವರು, ಕನಿಕರಿಸಲಿಲ್ಲ
ಭೂಮಿಯಲಿ ಬದುಕಿದರೂ, ಬರಡು ಬಾಳೇ ನನಗೆ
ಕಾರ್ಮೋಡ ಕತ್ತಲೆಯು ತುಂಬಿತ್ತು ಮನಕೆ

ಚಿಗುರಿನಾಸೆ ಮರಕೆ, ಜಿಗಿಯುವಾಸೆಯು ಮನಕೆ
ಹೆಣ್ಣಾಗಿ ಹುಟ್ಟಿರಲು, ಬಯಕೆಗಳ ಸುಖವು
ಕಷ್ಟಕಾರ್ಪಣ್ಯಗಳು ಇಷ್ಟ ಸಿದ್ಧಿಗಳು
ಅನುಭವಿಸಲಿರಬೇಕು ಆಶ್ರಯವು ಬಂದು

ಅಭಿಮಾನದಲಿ ಬದುಕು, ಬಿಗುಮಾನವಿರಬೇಕು
ಬಾಳೆಲ್ಲ ಬರಿದಾಗಿ, ಬಾಡಿ ಬಿದ್ದಿರಬೇಕೆ;
ಗೂಢ ಜೀವನದಲ್ಲಿ ನಿಗೂಢ ನಿಧಿಗಳು ಎಷ್ಟೆ
ಕೂಡಿಟ್ಟ ಪಾಪಗಳ ಪುಣ್ಯಗಳನೆಣಿಸಬೇಕು

ಬಾಳಿನುಬ್ಬರದಲ್ಲಿ ಅಬ್ಬರವು ಇರದಿರಲಿ
ಹಾಯಾಗಿ ಸಾಗಿರಲಿ ಬಾಳದೋಣಿ
ಮಳೆಗಾಳಿ ಬಿಸಿಲುಗಳು ನಲುಗಾಡದಿರಲೆನಗೆ
ಮುಂದೆ ನಡೆಸೆನ್ನ ಚುಕ್ಕಾಣಿ ಹಿಡಿದು

ಜೀವವೆಂಬುದು ಸ್ಪರ್ಶ, ಸ್ಪಂದನಗಳ ಮಾಲೆಗಳು
ಜೀವಿತವೆ ಸಂಗ್ರಾಮ, ಕೊನೆ ಬರುವತನಕ
ಸಜ್ಜನಳ ಮಾಡೆನ್ನ, ಸಜ್ಜು ಮಾಡಿಕೊ ತಂದೆ
ಗೆಲ್ಲಲೆಂದೇ ಹೊರಟೆ, ಹೋರಾಟಕಿಳಿದೆ.



## ಒಂದೇ ದಿನದ ಶಿಶುವು

ಒಂದು ದಿನವೂ ಬದುಕಲಿಲ್ಲ ಈ ನೋವದೇತಕೆ!
ಮೋಹವೆಂಬ ಪಾಶದಿಂದ ಬಿಗಿದೆಯೇಕೆ ಗಲ್ಲಕೆ!

ಒಂದು ದಿನದ ಶಿಶುವ ಜನನ
ಮನಕೆ ಹರುಷವ ಕೊಟ್ಟಿತು
ಮರಳಿ ಮಣ್ಣನು ಸೇರಿದಾಗ
ಮನಕೆ ಮುಳ್ಳನು ನೆಟ್ಟಿತು

ಮಗುವ ನೋಡಿ ಗೆದ್ದೆನೆಂದೆ
ಮಧುರ ಗಾನವ ಹಾಡಿದೆ
ಬದುಕಿಗೊಂದು ಬೆಳಕ ಕಂಡೆ
ಭ್ರಮೆಯ ಲೋಕಕೆ ಜಾರಿದೆ

ಎಷ್ಟೋ ಕನಸುಗಳೋಡಿ ಬಂದವು
ಕುಣಿಯತೊಡಗಿದುವಾಗಲೆ
ಕುರುಡು ಕತ್ತಲೆ ಮಾಯವಾಗಿ
ಬೆಳಕು ಬಾಳನು ಬೆಳಗಿತು

ಒಂದು ದಿನದ ನನ್ನ ಕಂದ
ಅತ್ತು ಮಡಿದನು ಬಾಳಲಿ
ಭೂಮಿಯಾಗಲೆ ನೆನೆದು ಹೋಯಿತು
ಸಾವನೋವಿನ ಮಳೆಯಲಿ

ಮೋಹವೆಂಬ ಕೊಂಡಿಯಿಂದ
ಕಳಚಿ ಹೋಯಿತು ನನ್ನೆದೆ
ಬಾಳಿನುದ್ದಕೂ ಕಾಡಲೆಂದೇ
ತೊಡಗಿ ಕೊಂಡಾ ಬೇಡಿಯು

ಮನದ ಹರುಷವೆ ಮಾಯವಾಯಿತು
ಬದುಕಿನಾಸರೆ ಕಾಣದೆ
ಹಲವು ವರುಷಗಳಾದರೇನು
ನೆನಪಿನಾಸರೆ ಒಸರಿದೆ.

# ಮೀರುತ್ತಿರುವ ವಯಸ್ಸು

ವಯಸ್ಸು ಮೀರಿತು ಎಂದು ನನ್ನ
ಜರೆಯ ಬೇಡವೆಂದಿಗೂ
ನಿನಗೂ ಆಯಿತು ಮೂವತ್ತು ವರುಷ
ಮರೆಯಬೇಡ ಕಾಲಚಕ್ರಕೆ ನೀನೂ ಸಿಲುಕಬೇಡ
ತಾರುಣ್ಯವೆಂಬುದು ತಗಡಿನ ತುಂಡು
ತುಕ್ಕು ಹಿಡಿಯಲಿದೆ ಕಾಲದಲಿ ಮುಂದು
ವೃದ್ಧಾಪ್ಯವೆಂದರೆ ನಡೆಯಲಾರದ ನಾಣ್ಯ
ಚಲಿಸಲಾರದೆ ಚಲಿಸುವ ಹಳೆಯ ವಾಹನ
ಕಷ್ಟನಷ್ಟಗಳಿಗೆ ನಲುಗಿ, ಋತುಗಳಿಗೆ ಸಿಕ್ಕಿ
ಜರ್ಝರಿತವಾದ ಜೀವಮಾನ, ಅವಮಾನ
ಸಹಿಸಲಾರದಷ್ಟು ಸಹಿಸಿ, ಸವಕಲಾದ ದೇಹ!
ಕನಸುಗಳು ಕಮರಿ, ಚಿಗುರಿಲ್ಲದ ಮರವು
ಮನವು ಕೊರಡಿನಂತಾಗಿದೆ, ಚಿಗುರೆನೆಂದಿದೆ
ಬದುಕೆಂಬುದು ಬರಿ ಭ್ರಮಣೆ ಮಾತ್ರ!

ಈ ಮರದಲ್ಲಿಯೂ ಹಿಂದೊಮ್ಮೆ ಚಿಗುರಿತ್ತು
ಮಿಡಿ ಹಣ್ಣು ಕಾಯಿಗಳು ಗಿಡವ ತುಂಬಿತ್ತು
ಹಕ್ಕಿಗಳೋ ಹಾರಿ ಹಾರಿ ಬರುತ್ತಿದ್ದವು
ಗಿಡಬಳ್ಳಿಗಳು ಆಶ್ರಯವ ಬಯಸುತ್ತಿತ್ತು
ಹಣ್ಣು ತಿಂದು, ಮಿಡಿಯ ಕುಕ್ಕಿ, ಗೂಡು ಕಟ್ಟುತ್ತಿದ್ದವು
ಪುಟ್ಟಪುಟ್ಟ ಮರಿಗಳಾಗಿ ರೆಕ್ಕೆ ಬಡಿಯುತ್ತಿದ್ದುವು
ಕಾಲಚಕ್ರ ತಿರುಗುತ್ತಿತ್ತು ನನ್ನ ನಾಡಿ ಬಡಿತಕೆ,
ಕಾಲನಾರ್ಭಟಕೆ ನನ್ನ ಮನವೂ ಮುದುಡತೊಡಗಿತು
ಮರದ ಎಲೆಗಳುದುರಿದಂತೆ, ನನ್ನ ಶಕ್ತಿಗುಂದಿತು,
ರೆಂಬೆಕೊಂಬೆಗಳಲ್ಲಿದಂತೆ, ಮರವೂ ಬೋಳು ಎನಿಸಿತು.

'ಬದುಕು' ಎಂಬುದು ಚಕ್ರದಂತೆ ಸುತ್ತು ಸುತ್ತ ಬರುವುದು
ಬಾಲ್ಯದಲ್ಲಿ ಬಂದುದೆಲ್ಲಾ ಯೌವನಕಾಸರೆಯಾಗದು
ವೃದ್ಧಾಪ್ಯವೆಂಬುದೆ ಕೊನೆಯ ಹಂತ, ಮುಂದೆ ಹೋಗಲಾರ

ಕಾಲಗರ್ಭದಡಗಲೆಂದು ಸತತ ಸಂಭ್ರಮ ಬಾಳಿಗೆ
ಹಳಿಯಬೇಡ ತೆಗಳಬೇಡ ನೀಚತನವ ತೋರಬೇಡ
ಕರ್ಮ ಧರ್ಮಗಳಲಿ ಶ್ರದ್ಧೆ ಮಾತ್ರ ನಮಗೆ ಶಾಶ್ವತ
ಬಿಡುಗಡೆಯಾಗುವತನಕ ನಡೆಯಬೇಕು ಪ್ರವೃತ್ತಿ
ನಿತ್ಯಶಾಂತಿಯರಸಬೇಕು, ಕಹಳೆ ಮೊಳಗಬೇಕು

○

## ನವಜ್ಯೋತಿ

ಗಾಢವಾಗಿಪ ತಿಮಿರವೆಲ್ಲೆಡೆಯು ಪಸರಿಸಲು
ದಾರಿ ಕಾಣದೆ ಕಂಗೆಟ್ಟು ಬಳಲಿ ಬೆಂಡಾದಾಗ
ನಾ ಕಂಡೆ ಬಲುದೂರ ಮಿನುಗುತಿಹ ನವಜ್ಯೋತಿ
ಪ್ರಜ್ವಲಿಸುತಿಹ ಕಿರಣ ಎನ್ನೆದೆಯ ಬೆಳಗಿಹುದು
ಉಜ್ವಲಿಸು  ತುಂಬಿಹುದು ಎನ್ನಲ್ಲಿ ನವಸ್ಫೂರ್ತಿ
ತನ್ನ ತಿಳಿ ಬೆಳಕಿನೊಳು ಇಡಿ ವಿಶ್ವ ಬೆಳಗಿಹುದು
ತನ್ನೆಡೆಗೆ ಬಾರೆಂದು ಸ್ವಾಗತವ ನೀಡುವುದು

ಜಗವೆಲ್ಲವ ಮರೆತು ಪರಿಶುದ್ಧ ಆತ್ಮದೊಡ
ನಾ ಬರುವೆ ನಿನ್ನಡಿಗೆ ಸಂಸಾರವನೆ ತೊರೆದು
ನಡು ನೀರಿನಲಿ ಮುಳುಗಿ ಬೆಂಡಾದ ಬಡನೌಕೆ
ದಡವ ತಾ ಕಂಡಂತೆ ನೀನಾದೆ ಎನಗೆ

ಭಯದ ಬೇನೆಯನೆಲ್ಲ ಅರೆ ನಿಮಿಷದೊಳು ಮರೆತು
ಸಂಸಾರದೊಳು ಪಡೆವ ಹುಸಿ ಸುಖವ ತೊರೆದು
ಎನ್ನಾತ್ಮದೊಳ ನಿನ್ನ ತಾಣವ ಬೇರ್ಪಡಿಸಿ
ನಿನಗಾಗಿ ಕಾಯುವೆನು ಶುದ್ಧಾತ್ಮಳಾಗಿ

ನೀನಿಲ್ಲದಾ ವಿಶ್ವ ತಾಳ ತಿಮಿರಮದಿರವು
ನೀನಿಲ್ಲದಾ ದೇಹ ಬರಿನೆರಳ ಗೂಡು
ಬಲುದೂರ ನೀನಿರುವೆ ಅವರೆಡೆಯೆ ನಾ ಬರುವೆ
ಎಂದು ನಿನ್ನನು ಕಾಂಬೆ ಹೇ ವಿಶ್ವವ್ಯಾಪಿ

ದೇಹ ಮುಚ್ಚಲು ಎನಗೆ ಹರಕು ಬಟ್ಟೆಯು ಸಾಕು
ಹೃದಯ ತುಂಬಲು ಬೇಕು ನಿರ್ಮಲದ ಬೆಳಕು
ನೀನೆನ್ನ ಆತ್ಮದೊಳ ಬಂದು ಸೇರಿದರಾಯ್ತು
ಇನ್ನಿಲ್ಲ ಹಿರಿದಾಸೆ ಜೀವನದಿ ಭವದೊಳಗೆ

○

# ಉದುರುವ ಹಲ್ಲುಗಳು

ಒಬ್ಬೊಬ್ಬರಾಗಿ ಹೊರಟಿರೆ ಹೋಗದಿರಿ
ತಪ್ಪೇನ ಮಾಡಿದೆನು ಆ ರೀತಿ ನಿಮಗೆ
ಎಷ್ಟೊ ವರ್ಷಗಳಿಂದ ಹೊತ್ತು ನಿಮ್ಮ ಚಾಕರಿ ಮಾಡಿದೆ
ಬಗೆಬಗೆಯ ಭಕ್ಷ್ಯಗಳ ತಿನಿಸುಗಳನಿತ್ತೆ
ನೀವು ಸಂಗಾತಿಗಳೆಂದು ತಿಕ್ಕಿ ತೀಡುತಲಿದ್ದೆ, ನಂಬಿ
ಸುಮ್ಮನಿದ್ದೆ
ನೀವೇ ಸೌಂದರ್ಯವೆಂದು ಹಲ್ಲು ಕಿಸಿಯುತಲಿದ್ದೆ

ಬಣ್ಣ ಬಣ್ಣದ ಮುಲಾಮುಗಳನು ಹಚ್ಚುತ್ತಿದ್ದೆ
ಥಳಥಳಿಸುವಂತೆ ದಿನವೂ ಉಬ್ಬುತ್ತಿದ್ದೆ
ಲಗ್ನ ನಿಶ್ಚಯದಲಿ ಕೂಡಾ ನನ್ನ ರೂಪ ಮೆರೆಯಲಿಲ್ಲ
ಸಾಲಾಗಿ ನಿಂತಿರುವ ನೀವೇ ರಂಜಿಸಿದಿರಲ್ಲ
ಮದುವೆಯಾದ ಮೇಲೊ ಪತಿಯ ಪಿಸುನುಡಿಯು
'ಸುಂದರಿ ನೀನು ಸುಂದರಿ' ನಿನ್ನಂದವೆಲ್ಲ ಸಂದುವಲ್ಲ!

ಎಷ್ಟೋ ವರ್ಷಗಳಿಂದ ಹೊತ್ತು ಸಲಹಿದೆ ನಿನ್ನ,
ಹುಟ್ಟು, ಸಾವು ಎರಡನ್ನೂ ನಾನೋಡಿಕೊಂಡೆ
ಬಿಟ್ಟು ಹೋಗಬೇಡಿರೋ ಗೂಡಿನೊಳಗಿನ ಹಕ್ಕಿಗಳೇ
ಒಬ್ಬೊಬ್ಬರೇ ಏಳುತಿರುವಿರಿ ನನ್ನಾಶ್ರಯ ಸಾಕೆಂದಿರಿ
ಎಲ್ಲ ಹೋಗುವಿರಿ? ಮಸಣಕ್ಕೆ? ಸಾಕಾಯ್ತೆ ನಿಮಗಿಲ್ಲಿ

ಅರುವತ್ತು ತುಂಬಿತೆಂದು ನನ್ನಿರವು ನನಗಿಲ್ಲ
ನಿಮಗಾರು ಹೇಳಿದರು ಈ ಒಸಗೆಯ

ಒಬ್ಬರ ಹಿಂದೊಬ್ಬರಾಗಿ ಹೊರಡಲನುವಾದಿರಿ
ಎಷ್ಟು ನೋವು ಕಾವು ನನಗಿಲ್ಲಿ ಬಲ್ಲಿರಾ
ನಿಮ್ಮ ಹೊತ್ತದ್ದಕ್ಕೆ ಸಾಕಿದ್ದಕ್ಕೆ ಈ ಪ್ರತಿಫಲವೇ?

ನಿಮ್ಮ ಜಾಗದಲಿ ಕೂರಿಸಿದೆ, ನಿನ್ನಂತೆ ಇದ್ದವರನ್ನು
ಹೊಂದಾಣಿಕೆಯಾಗಲಿಲ್ಲ ಮಾಡಲೇನು?
ಕನಿಕರವು ಇರಬೇಕು, ಕಾತುರವ ಪಡಬೇಡ
ಇನ್ನಿಷ್ಟು ದಿನವಿದ್ದು ಮುಂದಕ್ಕೆ ಹೋಗು
ಮುದುಕರಾದೆವು ಎಂಬರಿವು ನಮಗಾಗುವವರೆಗೂ
ನೀವಿದ್ದರೇ ಚೆನ್ನ! ಬಾಯಿ ತುಂಬಾ! ಬರಿ ಬಾಯಿ!
ಮಾಡಬೇಡಾ ಹೋಗಬೇಡಾ
ಇದೋ ಇನ್ನೊಮ್ಮೆ ನಿನಗೆ ನಮನ.

○

# ಕಾನನದ ಮರ

ಯಾರು ಬರುವರು
ಎಂದು ನೀನು ಮೊಗ್ಗು
ಬಿರಿಸಿ ಕುಳಿತಿಹೆ
ಹಸಿರುಡೆಯ ತೊಟ್ಟು ನೀನು
ನಸು ನಾಚಿ ನಿಂತಿಹೆ?
ತಂಗಾಳಿಗೆ ಮೈಯ್ಯನೊಡ್ಡಿ
ಥಳುಕಿ ಬಳುಕಿ ಬಾಗುವೆ
ಬರುವ ಅತಿಥಿ ಸುಳಿವ ಕೊಟ್ಟನೆ
ಝೇಂಕಾರವು ಮೊಳಗಿತೆ?
ಮಧುಪಾನದ ಬಟ್ಟಲಲ್ಲಿ
ರೆಕ್ಕೆ ಬಿರಿದು ಕುಳಿತನೆ
ಚಿಲಿಪಿಲಿಯ ಉಲಿತ ಕೇಳಿ
ಎದೆಯನುಬ್ಬಿಸಿ ಕುಳಿತೆಯ?

ಸೌಂದರ್ಯದ ರಾಣಿ ನೀನು
ಕಾನನದ ಸುಂದರಿಯೆ ದಿಟವು
ಕೈಯ್ಯ ಬೀಸಿ ಕರೆದೆಯಲ್ಲ
ಒಡಲ ತುಂಬಿಸಿಕೊಂಡೆಯ?

ನಿನ್ನ ಬಯಕೆ ತೀರಿದಾಗ
ಫಲಿಸಿತಲ್ಲ ಒಡಲಲಿ
ಹೂವು ಕಾಯಿ, ಹಣ್ಣು ತುಂಬಿ
ತುಳುಕುತಿತ್ತು ಒಡಲಲಿ
ನಿನ್ನ ಸೊಗಸು, ಕಂಡು ಮನಸು
ಭ್ರಮೆಯಲೋಕದಿ ಮೆರೆಯಿತು.

## ಉದಾಸೀನ

ಉದಾಸೀನಾ
ಸದಾಕಾಲ ನೀನು ನನ್ನನ್ನು ಅರಸುತ್ತಲಿರುತ್ತಿ
ನಾನೇನು ನಿನ್ನ ದಾಸಿನಾ?
ನೀನು ಅಂತಹಾ ಸಾಹಸಿನಾ!

ಎತ್ತೆತ್ತಲೋ ಹೋಗಬೇಕೆಂದಿದ್ದೆ
ಮುಂದೆ ಸಾಗಬೇಕೆಂದಿದ್ದೆ
ಆದರೆ ನೀನು ಬಿಡಬೇಕಲ್ಲ ಸಂಗಾತಿ!

ಎಲ್ಲವೂ ಕಲಿಯಬೇಕೆಂದಿದ್ದೆ
ಮಾಡಿ ಮಡಿಯಬೇಕೆಂದಿದ್ದೆ
ಆದರೆ ನೀನೆಲ್ಲಿ ಬಿಟ್ಟಿದ್ದೆ ಗಳಿಗೆಯಲ್ಲಿ?

ಹಕ್ಕಿಯಾಗಿ ಹಾರಾಡುತ್ತಿದ್ದೆ
ಚಿಗರೆಯಂತೆ ಓಡುತ್ತಿದ್ದೆ
ಬಿಡಬೇಕಲ್ಲ ನೀನು ಬೆಂಬಿಡದ ಭೂತ

ನಾನು ನಿನಗೆ ದಾಸಳಾದೆ
ಎಲ್ಲವನ್ನೂ ಕಳೆದುಕೊಂಡೆ
ಹೀನಳಾಗಿ ಬಾಳಲೆಂದು ಬಯಸಿಬಂದೆಯಾ!

ಸದಾ ನಿರ್ಲಕ್ಷ್ಯ ನಿರ್ಲಿಪ್ತ ಭಾವಗಳು
ಗುರಿ ಮುಟ್ಟಲಾರದ ನೋವುಗಳು
ಅನುಭವಿಸಬೇಕೆಂದೇ ನನ್ನ ಕೊಂದೆ

ನೀನು ಹೆಬ್ಬಾವು ನನ್ನ ದೇಹಕ್ಕೆ
ಬಿಗಿಯುತ್ತ ಬರುತ್ತಿದ್ದಿ ಸುಳಿ ಸುತ್ತಿ
ಕತ್ತೆತ್ತಿ ನೋಡಲೂ ಬಿಡುತ್ತಿಲ್ಲವಲ್ಲಾ ಬಿನ್ನಾಣಗಿತ್ತಿ

ಮರದ ಬೇರು ನಾರುಗಳಲ್ಲಿ
ನುಚ್ಚು ಮಾಡುತ್ತಿದ್ದಿ ನನ್ನನು
ಸಹಿಸಿ ನೋವು ಸಾಕಾಯ್ತು,
ಸಡಿಲ ಮಾಡು ಸಾಹಸಿ

ಕಪಿಮುಷ್ಟಿ ನಿನ್ನದಿದು
ಸೆಣಸಾಡಿ ಮಣಿದಿರುವೆ
ಎಂದು ಬಿಡುವೆಯಾ ನನ್ನ ಈ ಬಾಳಿನಲ್ಲಿ

ನನ್ನ ಬಾಳಿನ ಹಿಡಿತ ಮಿಡಿತ
ನಿನ್ನ ಬಾಹು ಬಂಧನದಲ್ಲಿ
ಕಳಚಿ ಓಡುವುದೆಂತೊ ಅರಿಯದಾದೆ.

○

# ಭೂತಾಯಿ ಚಕ್ಕಂದ

ಆಗಸದೊಡನೆ ಭೂತಾಯಿಯ ಚಕ್ಕಂದ ನಡೆದಿತ್ತು
ಎಲ್ಲೆಂದರಲ್ಲಪ್ಪಿ ಮುದ್ದಾಡಿದಳು ಬಾಚಿ ತಬ್ಬಿದಳು
ಮೂಲೆ ಮೂಲೆಗೂ ಮುತ್ತ ಕೊಟ್ಟು ಕೆಣಕಿದಳು ತಿಣುಕಿದಳು
ಆಗಸಕೆ ಚಿಂತೆಯಾಯಿತು, ಮೈಮತ್ತೇರಿತು
ಮುಸುಕ ಸರಿಸಿ ಮಿಂಚಿನಿಂದೊರಸಿ ಮುತ್ತನಿತ್ತ
ಮುದ್ದಿಸಿ ಮುದ್ದಿಸಿ ಸೊಕ್ಕ ಮುರಿದು ಗರ್ಭಕ್ಕೆ ಧಾರೆಯೆರೆದು
ಸಹಸ್ರ ಹನಿಗಳ ಸೃಷ್ಟಿ ಬೀಜಗಳ ಬಿರಡೆ ಬಿಟ್ಟ!

ಭೂತಾಯಿ ತಣ್ಣಗಾದಳು, ಒಡಲಲ್ಲಿ ಬಸಿರ ತುಂಬಿದಳು
ಪ್ರಸವ ವೇದನೆಯಲ್ಲಿ ಹೊರಳಾಡಿದಳು, ಮುಲುಗಾಡಿದಳು
ಜನಿಸಿದುವು ಒಂದಲ್ಲ ಎರಡಲ್ಲ ಸಹಸ್ರ ಸಂಖ್ಯೆಯಲಿ,
ಗಿಡಗಳು ಮನುಜರು ನಾನಾತರದ ಪಶುಪಕ್ಷಿ ಪ್ರಾಣಿಗಳು
ಸಾಕಿ ಸಲಹಿದಳು ಎತ್ತಿ ಮುದ್ದಾಡಿದಳು ಜೋಗುಳವ
ಹಾಡಿದಳು
ತದೇಕದೃಷ್ಟಿಯಲಿ, ಈಗವಳ ಗಮನ ತನ್ನ ಸೃಷ್ಟಿಯಲ್ಲಿ!

ಹೆತ್ತು ಸಾಕಾಯ್ತು, ತುತ್ತನಿತ್ತು ದಣಿವಾಯ್ತು
ತನ್ನ ಚೆಲ್ಲಾಟಕ್ಕೆ ಈ ರೀತಿ ಶಿಕ್ಷೆಯೇ ಎಂದು ಹಲುಬಿದಳು

ಸೂರ್ಯದೇವನ ಬೇಡಿದಳು, ನನ್ನನ್ನು ಕಾಪಾಡು ಬೇಗ
ಸೂರ್ಯನೋ ಕೋಪಿಷ್ಟ ನೆತ್ತಿಯಲೆ ಸುಟ್ಟಿದ್ದ
ಆಗಲೇ ನೆಗೆದಿದ್ದ ಸಾಗರದ ಕಡೆಗೆ
ಮೊಗೆಮೊಗೆದು ನೀರನ್ನು ಕೊಂಡೊಯ್ದ ಧರೆಗೆ

"ತಾಯೆ ನಿನಗೆ ಮಕ್ಕಳು ಸಾಕು, ಬೇಕೆನ್ನಬೇಡ
ಇನ್ನೆಂದೂ ಆಗಸನ ಬಳಿ ಸುಳಿಯಬೇಡ
"ಕಷ್ಟ ಬಂದಾಗ ಕರೆಯೆಂದು ತಾನು ಸುಳಿಕೊಂಡ
ಭೂತಾಯಿಯೇ ಕಣ್ಣು ತೆರೆದಳು, ಆಗಸವ ಕಂಡಳು
ಚಕ್ಕಂದವಾಡಲು ತಕ್ಕ ಸಮಯವೆಂದುಕೊಂಡಳು
ನೆಗೆದಪ್ಪಿ ಮುದ್ದಾಡಿದಳು ಮುಂದೆ ಮುದ್ದಾದ ಮಕ್ಕಳನು
ಪಡೆವೆನೆಂದಳು
ಹೀಗೆಯೇ ನಡೆದಿತ್ತು ಭೂತಾಯಿಯಾಟ, ಚಕ್ಕಂದ ಕುಣಿತ
ಸೃಷ್ಟಿ ಕಾರ್ಯದಲಿ ನಡೆದಿತ್ತು ಕಣ್ಣುಮುಚ್ಚಾಲೆ ನಿಮಿಷ
ನಿಮಿಷಕೂ

## ಅಮ್ಮ

ಅಮ್ಮ ನಿನ್ನ ನೆನಪು ಮಾತ್ರ
ಮನದ ಸುತ್ತ ಸುಳಿದಿದೆ
ಹಸಿಯ ನೋವಿನಂತೆ,
ನನ್ನ ಮನವ ನಿತ್ಯ ಕೊರೆದಿದೆ.

ಹೆತ್ತ ನೋವ ಮರೆತು ನೀನು
ಮೊಲೆಯನೂಡಿ ಸಲಹಿದೆ
ಹೊತ್ತು ಹೊತ್ತಿಗೆ ತುತ್ತನಿಟ್ಟು
ಮುತ್ತು ಕೊಟ್ಟು ಬೆಳೆಸಿದೆ

ತಿಕ್ಕಿ ತೀಡಿ ನನ್ನ ಮೈಯ್ಯ
ಬೆಣ್ಣೆಯಂತೆ ಮಾಡಿದೆ
ದುಡಿದು ತಂದ ಕಾಳಿನಿಂದ
ನನ್ನ ಒಡಲ ತುಂಬಿದ

ಓರೆಕೋರೆ ದಾರಿಯಿಂದ
ನೇರ ದಾರಿಯ ಹಿಡಿಸಿದೆ
ವಿದ್ಯೆ ಬುದ್ಧಿ ಕಲಿಯಲೆಂದು
ನಿನ್ನ ಜೀವ ಸವೆದಿಹೆ
ನನ್ನ ಬದುಕಿನಾಳದಲ್ಲಿ
ಕಡೆದ ಮೂರ್ತಿಯು ನೀನಿರೆ
ದಿನವೂ ಪೂಜೆ, ನೈವೇದ್ಯಗಳೆ
ನನ್ನ ಎದೆಯ ದೇವಿಗೆ

ಅಮ್ಮ ನೀನು ನಡೆದ ದಾರಿ
ನನ್ನ ಬಾಳಿಗೆ ದೀವಿಗೆ
ರಕ್ತ ಕಣದಲೂ ಹರಿದು
ನೀನೆ ಬಂದೆ ಉಸಿರಲಿ

ನಿನ್ನ ನುಡಿಯು ಜೇನಿನಂತೆ
ನಕ್ಕರದುವೆ ಸಕ್ಕರೆ
ದಿನಕೆ ನೂರು ನೆನಪ ತರುವೆ
ಜನುಮ ಬೆಸುಗೆ ಸಾರಿದೆ

ಬಾಳುತಿರುವ ನಿನ್ನ ಕುಡಿಯು
ಚಿಗುರು ತುಂಬಿ ನಿಂತಿದೆ
ಬೀಜ ಬಿತ್ತಿ ಬೆಳೆಸಿಕೊಡುವೆ
ನಿನ್ನ ಜೀವದುದ್ದಕು ಮುಂದಕೆ

# ನಾನು ಬೇಡುವುದಿಲ್ಲ

ನೀನು ಅನ್ನವ ಕೊಟ್ಟೆ
ಉಡಲು ಬಟ್ಟೆಯ ಕೊಟ್ಟೆ
ಮೇಲೆ ಭಾವಣಿಯಿತ್ತೆ
ಸಾಕೆ ನೀನು ನನಗೇನು ಕೊಟ್ಟೆ?

ನಾನು ಬೇಡಿದ್ದು ನೂರಾರು
ಬಯಸಿದ್ದು ಹಲವಾರು
ಹರಕೆ ಹೊತ್ತದ್ದು, ತೆತ್ತದ್ದು
ನಿನಗೆ ಲೆಖ್ಖಕ್ಕೇ ಇಲ್ಲ.

ಧನವಂತನ ಮಾಡು ಎಂದೆ
ದೋಚಿ ದೋಚಿ ಕೊಡು
ಅದರಲ್ಲಿ ನಿನಗೂ ಪಾಲಿದೆ
ಕೊಡುತ್ತೇನೆ ಎಂದೆ ಕೊಟ್ಟೆಯೇನು?

ವಿದ್ಯೆ ಕೊಡು ಬುದ್ಧಿ ಕೊಡೆಂದೆ
ಕಾಸಿಗಿಲ್ಲದ ವಿದ್ಯೆ ಕೆಲಸಕಿಲ್ಲದ ಬುದ್ಧಿ
ಕೊಟ್ಟು ಕೈ ತೊಳೆದುಕೊಂಡೆ
ಸಾಕೆ! ನಿನ್ನ ತಾರತಮ್ಯವ ಸಹಿಸಬೇಕೆ?

ನಿನಗೆ ಕೆಲವರೆಂದರೆ ಪ್ರಾಣ
ಮತ್ತೂ ಹಲವರು ಪಂಚಪ್ರಾಣ
ಲೆಕ್ಕಕಿಲ್ಲದ ನಮ್ಮ ಧ್ವನಿ ಕೇಳಿಸಿತೆ
ಕಿವುಡು ನಿನ್ನ ಕಿವಿ ತಿಳಿದಿಲ್ಲವೇ?

ಆರೋಗ್ಯವಾದರೂ ಕೊಡು ಎಂದೆ
ಗೂರಲು ಕೊಟ್ಟು ತಗೋ ಎಂದೆ
ನರಳಿ ನರಳಿ ಬದುಕಲೆಂದು
ಬೇಡಿ ಬಂದೆನೇನು ನಿನ್ನ?

ನನಗಾವುದೂ ಬೇಡ ಒಂದ ಕೊಡು
ಅದೇ ಮುಕ್ತಿ ಸಾವು ಎಂದೆ
ಬಾಳಿ ಬದುಕು ಎಂದುಹರಸಿ
ದೂಡಿಬಿಟ್ಟೆ ಭೂಮಿಗಿಲ್ಲಿ ನಾನೇನು ಹೊರೆಯೆ ನಿನಗೆ!

ಕನಸಿನಲ್ಲೂ ಬೇಡಲಾರೆ
ಬೇಡಿದುದನ್ನು ನೀನು ಕೊಡಲಾರೆ
ಈ ಬೇಡುವಾಟವಿಲ್ಲಿಗೆ ಅಂತ್ಯ
ನಾನೂ ನೀನುಒಂದೇ ಎಂಬುದು ಸತ್ಯ.



# ಏನ ಬೇಡಲಿ ನಿನ್ನ

ನಾನು ಕವಿಯಲ್ಲ, ಹಾಡುವುದೂ ಇಲ್ಲ
ಕಾವ್ಯಕ್ಕೂ ನನಗೂ ಸಂಬಂಧವಿಲ್ಲ
ನಾನು ಪದ್ಯ ಬರೆದಿಲ್ಲ ಗದ್ಯ ತಿಳಿದಿಲ್ಲ
ಪದ್ಯ ಗದ್ಯಗಳನ್ನು ಓದಲೂ ಬರುವುದಿಲ್ಲ

ಭಾವನೆಗಳು ಬಂದಾಗ
ಮನ ಕೆಣಕಿ ಕೆದರಿದಾಗ
ಬರೆಯುತ್ತೇನೆ ಏನನ್ನೋ ಏನೆನ್ನಬೇಕು?
ಮನದಲ್ಲಿ ನಿಂತಿದ್ದ ಕಸ ಮಾತೆಯನ್ನು

ಸಾವು ಹುಟ್ಟುಗಳಲ್ಲಿ ನಂಬಿಕೆಯು ನನಗಿಲ್ಲ
ಸತ್ತರೂ ಸರಿ, ಬದುಕಿದರೂ ಚಿಂತಿಲ್ಲ
ಆದರೂ ನನಗೆ ಬದುಕು ಕೊಡು, ಬಾಳಲೆಂದು
ದೇಹದಾರ್ಢ್ಯವ ಕೊಟ್ಟು ದುಡಿಯಲೆಂದು

ನಾನು ವರ ಬೇಡುವುದಿಲ್ಲ ನಿನ್ನ ಕಾಡುವುದೂ ಇಲ್ಲ
ಎಷ್ಟೆಷ್ಟು ಕೊಡುವೆ ನೀನು ಬೊಗಸೆಯಾಗಿ
ಸಾಲು ಸಾಲೇ ನಿಂತಿಹರು ನಿನ್ನ ಭಕ್ತಾದಿಗಳು
ಸಾಕೆಂಬ ಶಬ್ದವನು ಕೇಳರಿಯರು

ಬೇಡಿದ್ದೆಲ್ಲಾ ಕೊಡುವನೆಂಬ ಭ್ರಾಂತಿಯು ಜನಕ್ಕೆ
ನೀನೇನು ಕೊಟ್ಟಿದ್ದೆ, ನಿನಗೆ ಕೊಡಲು
ನೀನು ಕೊಟ್ಟಿದ್ದೇ ಅಲ್ಲ, ನನಗೆ ಬೇಕಾದಷ್ಟು
ನಿನ್ನ 'ಋಣ' ದಲ್ಲಿಯೂ ನನಗೆ ತೃಣ ಪಾಲೇತಂದೆ!

ಸಾಕು ಸಂಭ್ರಮ ನನಗೆ ಈ ಬಾಳೆ ಸುಂದರ
ಜಗವು ಸುಂದರ ಕೋಟಿ ನಕ್ಷತ್ರಗಳು
ಇಂಪಾದ ಇಂಚರಗಳು ಸೊಂಪಾದ ಗಾಳಿ
ಕಂಪು ತುಂಬಿದೆ ನಿನ್ನ ಹೂವರಾಶಿ

ನೀನಿತ್ತ ಈ ನೆಲದಿ ಕುಣಿದು ಕುಪ್ಪಳಿಸುವೆ
ನೀನಿತ್ತ ಗಾಳಿಯನೆ ಉಸಿರಲೆಳವೆ
ನೀನಿತ್ತ ನೀರೆನಗೆ ಅಮೃತ ಸೇಚನ
ಕಾಡಲಾರೆನು ನಿನ್ನ ನಾನೆಂದೆಂದಿಗೂ

○

## ಶಾಂತಿಯೆಲ್ಲಿ?

ಕಾರಣವರಿಯದೆ ಕೊರಗುವ ಮನಕೆ
ಶಾಂತಿಯು ದೊರೆಯದು ಎಂದೆಂದೂ
ಯೋಚಿಸಿ ಮಾಡೆಲೆ ನಿನ್ನಯ ಕಾರ್ಯವ
ಪೂರ್ಣದಿ ಫಲಿಸುಗು ಬೆದರದಿರು

ತನ್ನಯ ಕಷ್ಟಕೆ ಮರುಗುವ ಮನಕೆ
ಶಾಂತಿಯು ದೊರೆಯದು ಎಂದೆಂದೂ
ತಿಳಿಯೆಲೆ ಜೀವನ ಕಷ್ಟವ ಪರರಾ
ನಿನ್ನಯ ಮನವು ಮರುಕದಲಿ

ಐಸಿರಿಯ ಬಯಸುತ ಕಾಲವ ನೀಗಲು
ಶಾಂತಿಯು ಬೆದರಿ ನಿಲ್ಲದೆಯೇ
ದಾನವ ಮಾಡುವ ಧೀರನ ಕಾರ್ಯವ
ನಡೆಸುತ ಬಾರ್‍ಯೆ ಜೀವನ ರಥವಾ

ಕಲ್ಮಶ ಕಾರ್ಯವ ನೆನೆಯದೆಯೆ ಮನ
ನಿಷ್ಕಲ್ಮಶ ಮನವನು ಬೆಳೆಸುತಲೀ
ಸಾಗುವೆ ಮುಂದೂ ನಾನೆಂದೆಂದೂ
ಜೀವನ ರಥವಾ ದೂಡುತಲಿ.



# ಪ್ರಕೃತಿ ಮಾತೆಯೆ ಪರಮಗುರು ಎನಗೆ

ಪ್ರಕೃತಿ ಮಾತೆಯೆ ನೀನೆ ಪರಮಗುರು ಎನಗಿಂದು
ಬಾಗುತಿಹೆ ನಿನ್ನಡಿಗೆ ಅಭಯವನು ನೀಡು
ಕಲಿಸುತಿಹೆ ನೀನೆನಗೆ ಜೀವನದಿ ಪಾಠಗಳ
ಕಲಿಯುತಿಹೆ ನಾನಿಂದು ನಿನ್ನೊಡಲ ಹಸುಗೂಸು

ನಿನ್ನ ತನುವಿನ ಸೊಗಸೆ ಸತ್ಯವೆಂದರಿತಿರುವೆ
ಕೃತಕವಾಗಿಹುದೆಲ್ಲ ಮಾನವನ ಸೌಂದರ್ಯ
ಹಸನಾಗಿ ಬೆಳೆದಿರುವ ಹಚ್ಚೆ ಹಸುರಿನ ಕಾಡು
ತಣ್ಣನೆಯ ಬೀಸುತಿಹ ತಂಗಾಳಿ ಸವಿತಂಪು

ಕೋಗಿಲೆಯ ಕಲರವವೆ ಅಮರವಾಗಿಹಗಾನ
ಮಾನವನ ಅನುಕರಣೆ ವ್ಯರ್ಥವಲ್ಲವೆ ಪೇಳು
ಎಮ್ಮದೆನ್ನುವೆನಲ್ಲ ನಿಮ್ಮದಲ್ಲವೆ ಪೇಳು
ಅರಿಯದಿಹ ಮಾನವನೆ ಕಡು ಮೂರ್ಖನಿಂದು

ನಿನ್ನೊಡಲ ಒಣಜೀವಿ ತಾನೆಂಬ ಭಾವನೆಯು
ಮಾನವನ ಮನದಲ್ಲಿ ತಾ ನೆಲಸದಿಂದು
ಹೃದಯ ಬಿಚ್ಚುತ ನಿಂತ ಉಚ್ಚನಾರಿಯ ತೆರದಿ
ನಿನ್ನ ತನುವಿನ ಸೊಬಗು ಅಚ್ಚಳಿಯದಿಹುದು

ಜೀವನವ ಕಲಿಸಲೆಂದೆನಗೇಕೆ ಗುರು ಚಿಂತೆ
ಗುರುವಾಗಿ ಕಾಣಿಸುತಿಹೆ ನಿನ್ನೊಡಲ ಇದಿರಾಗಿ
ಕಷ್ಟಸುಖಗಳ ತಿಳಿವು ಇಷ್ಟ ಸುಖಗಳ ಅರಿವು
ಭವದ ಬೇನೆಯನುಂಬ ಬೆಂದ ಜೀವಿಗಳೆಲ್ಲಾ?
ಕಲಿಯಲಿಹ ಕಲಿಸಲಿಹ ವಸ್ತುಗಳು ನಿನ್ನಲ್ಲಿ
ಇಂದೆ ತೊಡಗುವೆ ನಾನು ಗುರುವೆಂದು ಪೂಜಿಸುತಲಿ
ಕಲಿಯುವೆನು ಪಾಠಗಳ ನಿನ್ನೊಡಲ ತಿರು ತಿರುಗಿ

## ಸಂಸಾರ ಸೊಡರು

ಬಾ ಗೆಳತಿ ಒಡನಾಡಿ ಹಸನಾಗಿ ಕೂಡಿಲ್ಲ
ನಿನ್ನ ಬಾಳಿಗೆ ವೀಣೆ ತಂತಿಯನು ಮೀಟಿಲ್ಲ
ಎನ್ನ ಬಾಳಿನ ಹಾಡ ಹಾಡುವೆನು ಕೇಳಿಲ್ಲ
ಸಮರಸವನೆ ಬೆರೆಯದಿಹ ಬರಿರಾಗಳೆ ಗೀತೆ

ಕರಿಯ ಮೋಡಗಳೊಂದೆ ಆಗಸವ ಮುತ್ತುವರ
ಬರಿಯ ಗುಡುಗುಗಳಲ್ಲಿ ತಾನಂತ್ಯಗೊಳ್ಳುವುದೆ
ಮಳೆಯಿಲ್ಲದೆ ಬರಿದಾಗಿ ಒಣವಾಗಿ ಹೋಗುವುದೆ
ಸರಸ ಜೀವನವೆಲ್ಲ ವಿರಸದೊಳು ಮುಗಿಯುವುದೆ?

ಜೀವನವು ಸುಡುಗಾಡು ಎಂದೆನೇ ನಾನಂದು
ಜೀವನವು ಬರಿಬರಡು ಎಂದೆನೇ ತಿಳಿಯದೆಯೆ
ಕಾರ್ಮುಗಿಲು ನಡುವಿರುಳು ಎಂದತ್ತು ಕೊರಗಿ
ಅನವರತ ಕಂಬನಿಯ ಮಿಡಿಯುತ್ತ ಕಳೆವೆನೆ

ಅಂತಿಲ್ಲ ಚಿಂತಿಲ್ಲ ಜೀವನವು ನಡುಹಗಲು
ಸೂರ್ಯ ಚಂದ್ರರ ಪಡೆದ ಹೊಸತಾದ ಸುಖದುರುಳು
ಸುಖವು ಸುಗ್ಗಿಯು ಎನಲು ದುಃಖ ಕುಗ್ಗಿಯು ಬರಲು
ಜೀವನವು ಸಮವಕ್ಕು ಜೀವನದ ತಿಳಿವಕ್ಕು

ಹೊಳೆವ ಜ್ಯೋತಿಯ ಕಂಡು ಕೀಟಗಳು ತಾ ಬಂದು
ಸು ಸುಳಿದು ಹಾರಾಡಿ ಮೈ ಸುಡಲು ಸಾಯುವುದು
ಹೊಳೆವ ಜ್ಯೋತಿಯ ಬಳಿಯೆ ಸುಡುವ ಮದ್ದಿಹುದೆಂದು
ಮುಗ್ಧ ಕ್ರಿಮಿಗಳಿಗೆಂತು ಅರಿಯುವುದು ಹೇಳು

ಮಳೆಯಗಾಲದ ಅಣಬೆ ಕಂಡಿಲ್ಲ ನೀನೇನು
ಆಗಸದೆ ಮಿಂಚುತಿಹ ಮಿಂಚುಗಳ ಕಂಡಿಹೆಯ
ಶಾಶ್ವತವೆ ಪೇಳೊಮ್ಮೆ ಸಂಸಾರದಿರವನ್ನು
ಉಂಬುವನೆ ಸೂಚಿಸಳೆ ಪ್ರಕೃತಿ ಮಾತೆಂಬ ನಿನಗೆ

ದೇವನಿರುವನು ನೋಡು ಅನಂತ ತಪಗಳ ಮಾಡು
ಬಲುದಣಿದು ಬಲುವಣಿದು ಅವನಲ್ಲಿ ನೆಲೆಮಾಡು
ಅನಂತ ಶಾಂತಿಯ ಮುಂದೆ ಅಚಲ ಪ್ರೇಮದ ಮುಂದೆ
ಕಾಣಬಹುದೆ ನೋಡು 'ಸಂಸಾರ ಸೊಡರು'.

## ಅಂತರಾತ್ಮನ ಗೋಳು

ಕರುಣೆಯ ಬೀಡೆಂದು ನೆನೆದು ಅನವರತವೂ ದೇವರನ್ನು ಭಜಿಸುತ್ತಿದ್ದ ಮಗಳು ಜೀವನದ ಪರಮಾವಧಿ ಕಷ್ಟಗಳನ್ನನುಭವಿಸಿದ ಮೇಲೆ ತನ್ನ ತಾಯಿ ಭಕ್ತಿಯಿಂದ ಕೈ ಮುಗಿದು ದೇವರನ್ನು ಪ್ರಾರ್ಥಿಸುವುದನ್ನು ಕಂಡು ಮಗಳು ತಾಯೊಡನೆ ಹೇಳುತ್ತಾಳೆ–

ಅಮ್ಮ ಭಜಿಸದಿರು ಸ್ಮರಿಸದಿರು ನೀನವನ
ಅವರ ಕ್ರೂರ ಅವ ಮೂರ್ಖ ತಿಳಿದಿರುವೆ ನಾನಮ್ಮ
ಎನ್ನ ಬಾಳ ಸೊತ್ತ ಅಪಹರಿಸಿ ಸುಡುತಿಹನು
ಎಂತು ಸಹಿಸುವೆನಮ್ಮ ಈ ಪುಟ್ಟ ಹೃದಯದೊಳು
ಕರುಣೆದೋರನು ಪಿತನು ಸತ್ಯ ಕಾಣನು ದೇವ
ಭರಿದೆ ಭಜಿಸುವೆಯೇಕೆ ನಿತ್ಯಲವನಾ
ಕರುಣೆಯಾ ಬೀಡೆಂದು ಅರಿತಿದ್ದೆ ನಾನಂದು
ಎನ್ನಾಸೆ ಬರಿದಾಯ್ತು ಜೀವನದ ಕಾರಿರುಳ
ಹೊದಿಕೆಯೇ ಎನಗಾಯ್ತು ಎಂತು ಸಹಿಸುವೆನಮ್ಮ
ಈ ಉರಿಯ ಬಾಳಿನೊಳು ಎಂತು ಸಹಿಸುವೆನಮ್ಮ
ಪೇಳಮ್ಮ ಎನಗೊಮ್ಮೆ ನಿನ್ನ ಮೃದು ನುಡಿಯಿಂದ
ಅರಿತಿಲ್ಲ ನಾನವರ ಅರಿಕೆಯನು ನೀಪೇಳು
ಜೀವನದ ಕಹಿಯೊಮ್ಮೆ ಕುಡಿಯಬೇಕೆಂದು
ಎನ್ನ ಜೀವಕೆ ಕೊಡಲಿ ಇಡುವಾಗ ಎನಗೊಮ್ಮೆ
ಇಡಬೇಡ ಎಂದೇಕೆ ತಡೆದಿಲ್ಲ ಆ ದೇವ
ಅಂದು ಅಳುವಿನಾ ಕಾಣ ಇಂದು ಅಳುವಿನಾ ಗೂಟ
ಎಂದೆಂದೂ ಬರೆದನೇ ಅಳುವಿನಾ ಬಾಳೆನಗೆ
ಭೇದವನು ತೋರುವನು ಜೀವನದಿ ಜಗದೊಳಗೆ
ಭೇದ ಭಾವವ ತೋರುವ ದೇವನವನಮ್ಮ
ಐಸಿರಿಯ ನೀಡುವನು ಹಲವು ಜೀವಿಗಳಲ್ಲಿ
ಐಸಿರಿಯ ನೆರಳನ್ನ ಈಯದೆಯೆ ಕೆಲರಲ್ಲಿ
ಜೋಳಿಗೆ ಬಗಲೊಳಗೆ ಪೊತ್ತು ತಿರುಗುತಲಾಗ
ಸಿರಿವಂತರೊದೆದೊದೆದು ದೂಡುವರು ಇಳೆಯಲ್ಲಿ
ಮೃಷ್ಟಾನ್ನ ಭೋಜನವ ಗೈಯುತಲಿ ಹರುಷದಲಿ
ವಾರಾನ್ನ ಮಾಟವ ಗೈಯುತಲಿ ಬೇಗೆಯಲಿ
ಜೀವನದ ರಂಗವನು ಕೊಂಡೊಯ್ವ ದೇವನು
ಕರುಣೆದೋರುವನೆಂದು ನಂಬದಿರು ನೀ ತಾಯೆ
ಬಡವ ಬಲ್ಲಿದನೆಂಬ ಭೇದವನು ತೋರುವನು
ಬಡವಳಾಗಿಹೆ ನೀನು ಭರಿದೆ ಭಜಿಸುವೆಯೇಕೆ
ಭಜಿಸದಿರು ಓ ಮಾತೆ ನೀನೆಂದೂ ಕೈಮುಗಿವೆ.

ಅದಕ್ಕೆಂದೇ ಇದನು ಬರೆದೆ ಬರೆದು ಕೈತೊಳೆದೆ
ಮನದ ಕೆಸರನು ತೊಳೆದು ಹೊರಹಾಕಲೆಂದು
ಕಾಸದಕೆ ಬೆಲೆಯಿಲ್ಲ, ಕಾವ್ಯಕೂ ಅಷ್ಟೆ
ಕವಿಗಳಿಗೂ ಕಪಿಗಳಿಗೂ ಸಾಮ್ಯವಿದೆಯಲ್ಲಾ
ಚಂಚಲತೆ, ಚಪಲತೆ, ಚೇಷ್ಟೆಗಳು ಎಲ್ಲಾ



## ಸುಂದರ ವೃಕ್ಷ

ಆ ಸುಂದರ ವೃಕ್ಷ ಬಲು ಚೆನ್ನಾಗಿತ್ತು
ರೆಂಬೆ ಕೊಂಬೆಗೂ ಹಸುರೆಲೆ ತುಂಬಿತ್ತು
ನಸುಗಾಳಿಗೆ ಮೈಯನೊರಸುತಿತ್ತು
ಬಿಸಿಗಾಳಿಯ ಉಸಿರಿಗೆ ನಾಚುತಲಿತ್ತು

ಸುಮ್ಮನೆ ಕೂರದು ಸುಂದರವೃಕ್ಷ
ಸದ್ದುಗದ್ದಲಕೆ ಮೈಮರೆಯುತಲಿತ್ತು
ಹೂಗಳೋ ಬಣ್ಣದ ಕಾರಂಜಿ
ಮರವನೆ ಹೊದ್ದಿತು ಶತರಂಜಿ!
ಬಣ್ಣದ ಹಾಸುಗೆ ಹಸುರಿನ ನೆಲಕೆ
ನುಣ್ಣನೆ ತೋರಿದೆ ಭೂಮಿಯಲಿ

ಸಂಭ್ರಮ ಸ್ವಾಗತ ಜೇನಿನ ನೊಣಕೆ
ಪಕ್ಷಿಗಳಿಗಾಯಿತು ಸವಿಯೂಟ
ಚಿಲಿಪಿಲಿ ಗಾನ ಡಮರುಗಳು
ತುಂಬಿದುವಲ್ಲಿ ಭ್ರಮರಗಳು

ಗಾಳಿಯೊಳಾಡುತ ನೆಲವನು ಸೇರುತ
ಬಿದ್ದುವು ಕುಸುಮಗಳು ರಾಶಿಯಲಿ

ಕಾಯದೇ ಬಿಟ್ಟಿತು ಕೋಡನು ಕೊಟ್ಟಿತು
ದಿನಗಳ ಸಾಲಿಗೆ ಒಂದೊಂದು

ಮೆಲುಕಲು ಬಂದುವು ಹಸುಗಳ ಹಿಂಡು
ನೆರಳಲಿ ತಾವೇ ಮಲಗಿದವು
ಕುರಿಗಳೂ ಬಂದುವು ಕುರುಬನ ಕೂಡ
ತಾವೇ ಮೇದುವು ನೆರಳಲ್ಲಿ

ಏನೋ ಚಂದ ಮನಕಾನಂದ
ಸುಂದರವಾಗಿ ಕಾಣುತಿಹೆ
ಕಪ್ಪಿನ ಎಲೆಗಳ ನನಗೆ ಕೊಡು
ಚಿಗಿರೆಲೆ ಹಸುರೆಲೆ ತಿನ್ನಬಿಡು
ಹೂಗಳ ಕೊಯ್ದು ಮಾಲೆಯನೆಯ್ದೆ
ಆ ದೇವರಿಗೆಂದು ನಾ ಕೊಡುವೆ.

○

# ಹಾವು–ನೋವು

ನಾನು ಹಾವಾಡಿಗನಲ್ಲ
ಹಾವನು ಆಡಿಸುವುದೂ ಇಲ್ಲ
ಹಾವು ಹಿಡಿಯುವುದಿಲ್ಲ
ಕಂಡ ಕಂಡಲ್ಲಿ ಕುಣಿಸಲಾರೆ

ಹಾವು ಹೆಡೆಯನು ಬಿಚ್ಚಿ
ಪುಸ್ ಪುಸ್ ಎಂದಾಗ
ಕಾಡುತಿದೆ ಮನದಲ್ಲಿ
ನೂರೆಂಟು ನೋವು

ಹಾಯಾಗಿ ಹರಿದಾಡಿ
ಗಿಡದ ಮರೆಯಲಿದ್ದ ಹಾವು
ಹಿಡಿದು ತಂದು ಹಲ್ಲು
ಮುರಿದು ಬುಟ್ಟಿ ತುಂಬಿದ್ದಾರೆಂದು

ಕಷ್ಟವೆಷ್ಟೊ ದುಃಖವೆಷ್ಟೊ
ಹೊಟ್ಟೆ ಹೊರೆಯಲೆಂದು
ಆಡಬೇಕು ಹೆಡೆ ಬಿಚ್ಚಿ
ಪುಂಗಿ ನಾದಕ್ಕೆ ಎಷ್ಟು ಬೇನೆಯದಕ್ಕೆ

ನೂರು ಸಾರೆ ಏಳಬೇಕು
ಬೀಳಬೇಕು ನೆಲಕೆ ಪಾಪ
ಒಂಟಿ ಬಾಳು, ಬದುಕಬೇಕು
ಇಲ್ಲದಾರು ಆಸರೆ!

ಹಾವಾಡಿಗನಾದರೇನು
ಹಾವು ಹಿಡಿಯಬೇಡವೇ
ಹಲ್ಲು ಮುರಿದು ಕುಣಿಸಬೇಕು
ಅವನ ಬದುಕಿನಾಸರೆ

ಏನು ನೋಡಲದರ ಮೈಗೆ
ಚಿನ್ನ ಮೆತ್ತಿದಂತಿದೆ
ಎಂತಹಾ ಹೆಡೆಯೊ ಬಿಚ್ಚಿದಾಗ
ಮೋಡಿ ಮಾಡಿದೆ ಆಡುವಾಗ

ಹಾವ ನೋಡಲಾರೆ ನಾನು
ಕೆದಕುತಿರುವುದು ನೋವನು
ನಾನೂ ಒಂದು ಹಾವು ಎಂಬ
ಭಾವವೆನ್ನ ಕೆಣಕಿತು.

○

# ಸ್ವಾತಂತ್ರ್ಯ ಪಕ್ಷಿ

ಇದು ಸುವರ್ಣ ಪಂಜರ ಗಿಣಿ
ಇದರ ಬೆಲೆ ನಿನಗೇನು ಗೊತ್ತು
ನಿನ್ನ ಬಂಧಿಸಲೆಂದೇ ಸಿದ್ಧ ಮಾಡಿದೆನಿದ
ನಿನ್ನ ಸುಖಕಾಗಿಯೇ ಬದ್ಧವಾಯ್ತು

ನಿನಗನ್ನ ನೀಡಲೆಂದು ಬಂಗಾರದಾ ಕಟ್ಟೆ
ನೀರಿಗಾಗಿಟ್ಟಿರುವೆ ಬಂಗಾರದಾ ಚೊಂಬು
ನಿನ್ನ ಹಸಿವಿನಾಗಿಟ್ಟಿರುವೆ ಹಣ್ಣುಗಳ ರಾಶಿ
ಕಿವಿಗಾಲಿಸಲೆಂದೆ ಗಾನಗಳ ಪಟ್ಟಿ

ನಿನಗಾಡಲೆಂದಿಟ್ಟಿರುವೆ ಆಡುಮಂಚಗಳನಿಲ್ಲಿ
ನಿನಗಾಗಿ ಕೊಟ್ಟಿರುವೆ ಪಂಜರಕೆ ಪಟ್ಟಿ
ಬರಿದೆ ದುಃಖಿಸಬೇಡ, ಇನ್ನೇನು ಬೇಕು
ಪಂಜರವ ಬಿಟ್ಟೋಡುವ ಮಾತನ್ನು ಬಿಟ್ಟು

ಕಟ್ಟಿ ಹಾಕಲಿಲ್ಲ ನಿನ್ನ ಕಾಲುಗಳ ನಾನು
ಬಿಚ್ಚ ಬೇಡೆಂದಿಲ್ಲ ನಿನ್ನ ಪುಕ್ಕಗಳ
ಕಾಳು ಕೂಳಿಗೆಂದು ಹೊರಗಲೆಯಬೇಕಿಲ್ಲ
ಬಿಸಿಲು ಮಳೆಗಾಳಿಗಿನ್ನು ತೊಯ್ಯಬೇಕಿಲ್ಲ

ನಿನಗಿದುವೆ ನಾಕ, ಸುಖವೆಂದರಿತೆ ನಾನು
ನಿನ್ನನ್ನು ಬಿಡಲಾರೆ ನೀನೆನ್ನ ಪ್ರಾಣವಾಯು
ಏನ ಬೇಡಿದರು ಕೊಡುವ ಹುಮ್ಮನಸು ನನಗೆ
ಬೇಕಾದ್ದ ಬೇಡಿಕೋ ಕೊಡುವಾತ ನಾನು

ಕಣ್ಣೀರ ನಿಡುತಿರುವೆ ಬರಿದೆ ದುಃಖಿಸುತಿರುವೆ
ಮುಟ್ಟದೆಯೆ ಹಾಲ್ವೇನ ಹಣ್ಣುಗಳ ಸವಿಯ
ಕಾಡಿನಾಸರೆ ತಪ್ಪಿತೆಂದೇ ನಿನ್ನುಸಿರು
ಕಾಡಿನಲ್ಲಿ ಇಲ್ಲದುದನೇನೇನ ಕಂಡೆ?

ಸ್ವಾತಂತ್ರ್ಯವಿಲ್ಲೆಂಬ ಸೊಲ್ಲಿಗಾಗಿ
ನಿತ್ರಾಣಿಯಾಗುವೆ ಬಾ ನನ್ನ ಗಿಣಿಯೆ
ಹಾರಿಹೋಗು ನೀನು ಆಗಸದ ಎತ್ತರಕೆ
ಸುಖವೆಂಬ ಕಲ್ಪನೆಯ ನಿಜಲೋಕ ನಿನಗೆ

O

## ಬದುಕು- ಬಂಗಾರ

'ಬದುಕು' ಎಂಬುದೇ ಅಜ್ಞಾನ
ಬದುಕ ಕೊಟ್ಟವನೇ ಅಂತರ್ಧಾನ
ಜೀವ ಜೀವಿಗೂ ಬರೆದಿದೆ ಹೋದ ಅವಸಾನ!

ಏನೇನ ತುಂಬಲಿ ಎಂಬುದೇ ಧ್ಯಾನವಿಲ್ಲ
ಎಲ್ಲವೂ ನನ್ನದೆಂದು, ನನಗೇ ಬೇಕೆಂದು
ಹಂಬಲಿಸಿದ ಬದುಕಿಗೆ ಬಣ್ಣ ಬಳಿದಿಹರು

ಆಸ್ತಿಪಾಸ್ತಿಗಳಿಗಾಗಿ ಅಂತಸ್ತುಗಳಿಗಾಗಿ
ಹೊಡೆದಾಡಿ ಬಡಿದಾಡಿ ಕೆಟ್ಟು ಹೋಗುವರು
ಜೀವನಕೆ ಹೆಬ್ಬಾವಿನಂತೆ ಬಿಗಿದೇ ನಡೆಯಿತು
ಅತ್ತಿತ್ತ ಮಿಸುಕಾಡದೇ ಬದುಕೆಂಬರು

ಶೃಂಗಾರದೊಡವೆಗಳ ಹೇರಿಕೊಂಡು
ಬಂಗಾರ ಬಟ್ಟಲಲಿ ಸ್ನಾನ ಮಾಡುವರು
ಬಗೆಬಗೆಯ ಉಡುಪುಗಳಲಿ ಶೃಂಗರಿಸಿ,
ದೇಹವನು, ತನ್ನದೆಂದೇ ಕಾಪಾಡುವರು

ಹುಟ್ಟಿಗೂ ಸಾವಿಗೂ ಹೆಚ್ಚಿಲ್ಲದಂತರ
ಕಟ್ಟುನಿಟ್ಟಿನ ಬಾಳು ಬಾಳಬೇಕು
ಇದ್ದಾಗ ಕೊಡಬೇಕು, ದಣಿದಾಗ ಬಿಡಬೇಕು
ವ್ಯಾಮೋಹದಿಂದೇಕೆ ಬದುಕಬೇಕು!

ಗೇಣು ಹೊಟ್ಟೆಯ ತುಂಬಲು
ಸಾಕಷ್ಟು ಹಿಟ್ಟಿರಬೇಕು, ಅಟ್ಟಿರಬೇಕು
ಚಿಂತೆ ತಾಪತ್ರಯಗಳ ಮರೆಯಬೇಕು
ಬಂಗಾರದ ಬದುಕು, ಬಾಳಿ ಸಾಗಲೆಬೇಕು
ಹುಂಬತನವನು ಬಿಟ್ಟು ಹೋಗಬೇಕು.

# ಮಲೆನಾಡು

ಮಲೆನಾಡ ಕಾಡುಗಳಲಿ ಮಂಜುಹನಿ ಬಿದ್ದಾಗ
ಮುಂಜಾನೆ ಗಾಳಿಯಲಿ ಮೈನವಿರೇಳುವುದು
ಉದಯರವಿ ಮೂಡಿರಲು, ಮಂಜು ತಾ ಕರಗಿರಲು
ಮೈಮನವು ಮುದವೇರಿ ನವಿಲಾಗುವುದು

ಕೆಂಪು ಹವಳದ ಹೂವು ನೆಲವೆಲ್ಲ ಹರಿದಿದೆ
ಭೂತಾಯಿ ಮಡಿಲಿಂದ ಎಚ್ಚೆತ್ತು

ಕೇಪುಳದ ಹೂವುಗಳು ತಾವರಳಿ ನಿಂತವು
ಗೊಂಚು ಗೊಂಚಲಿನಲ್ಲಿ ಕಂಗೊಳಿಸಿದವು
ಕೆಂಪು ಹಣ್ಣನು ಕಂಡ ಹಕ್ಕಿಗಳು ಕುಕ್ಕಿದವು
ಸವಿನೋಡಿ ಹೋದವು.

ಮುಳ್ಳು ಬೇಲಿಯ ನಡುವೆ
ಮೆಲ್ಲನೆ ಬಂದವು ಬಿಳಿಬಣ್ಣದ ಬಿಕ್ಕೆಗಳು ಚಿಕ್ಕೆಯಂತೆ
ಕಲಕಲನೆ ನಕ್ಕವು ತಾ ಮೈ ಕುಲುಕಿ ನಕ್ಕವು
ಕೊಯ್ಯಲು ಮುಡಿಯಲು ಬಾರದು ಸುಮವು
ಅಂದವ ನೋಡಲು ಕರೆದುವಲ್ಲಿ

ಕಾಡುನಾಡಿನ ಮಧ್ಯೆ ರಥವೇರಿ ಬಂದವು
ಬಂಗಾರದ ಗಿಣಿಗಳು ಗರಿಕೆದರಿ
ಬೆದರಂಗಿ ಹೂಗಳು ಮದರಂಗಿ ನಿಟ್ಟವು
ಗಿರಿಕನ್ಯೆಯ ಕೆನ್ನೆ ಕೆಂಪಾದವು

ಮಾಗಿ ಮಾಸದಲ್ಲಿ ಮೌನವು ಭೂಮಿಗೆ,
ಮಂಜು ಮುಸುಕ ಹೊದ್ದು ಮಲಗಿದಳು
ಚಿಟ್ಟೆ ಕೀಟಗಳೆದ್ದು ಬಟ್ಟಲಲಿ ಮೆದ್ದವು
ಹನಿಜೇನ ಕುಡಿದವು ಕುಣಿಕುಣಿದು

ಮಾವು ಬೇವುಗಳೆಲ್ಲ ಹೂವ ಮುಡಿ ಕಟ್ಟಿದವು
ಕೋಗಿಲೆ ಮರವೇರಿ ಕೂಗುಟ್ಟಿತು
ಚಿಲಿಪಿಲಿಗಾನದಿ ಪಕ್ಷಿಗಳು ಕರೆದವು
ಗುಟುಕ ತಂದಿತ್ತವು ಮರಿಗಳಿಗೆ

ಚಿಗರೆಗಳೋಡಿದವು ಹಾವು ಹರಿದಾಡಿತು
ಪರಪರ ಸದ್ದು ತರಗೆಲೆಯಲ್ಲಿ

ಕಾಯಿ, ಹಣ್ಣುಗಳು, ಬಣ್ಣಬಣ್ಣಗಳಲ್ಲಿ
ಕಾಡಿನ ಬದುಕು ತುಳುಕಿದವು

ನೀರಿನ ಝುರಿಗಳು ಜೀರುಂಡೆ ಧ್ವನಿಗಳು
ಕಾಡಿನ ರಾಜ್ಯದ ಸಿರಿನುಡಿಗಳು,
ಸಕ್ಕರೆಯ ಸವಿಯಂತೆ ಸುತ್ತು ತಿರುಗುವ
ಅಕ್ಕರೆಯ ತಾಣವಿದು ಮೈಮನಕೆ.

○

## ದೇಹ

ಈ ದೇಹದೊಳಗೆ ಬಚ್ಚಿಟ್ಟದ್ದು ಮಾಂಸ
ಮೂಳೆ ಮಜ್ಜೆಗಳು ಮಾತ್ರವಲ್ಲ
ನರನಾಡಿಗಳಲಿ ಹರಿವ ರಕ್ತ ಮೇದಗಳಿಲ್ಲ
ಎದೆಯ ಹೊಡೆದಾಟಗಳು ಶ್ವಾಸದುಸಿರಾಟಗಳು
ಎಡೆಬಿಡದೆ ದುಡಿಯುತಿವೆ ನಾನಾಕೋಶಗಳು

ಇನ್ನೂ ತುಂಬಿದೆ ಒಳಗೆ ಅಸ್ತಿತ್ವವಿಲ್ಲದ್ದು
ಹೇಸಿಗೆಯು ಹಲವೆಲ್ಲ ಹೇಳಬಾರದ್ದು
ಸುಳ್ಳು ಸಾವಿರಗಳು, ಅನಂತ ಅಪರಾಧಗಳು
ಅನ್ಯಾಯ ಸರಪಣಿಯಲಿ ಬಿಗಿದಿತ್ತು ದೇಹ
ಅಲಂಕಾರಗೈದಾಗ ಆಗಿತ್ತು ಮಾಯ!

ಬಗೆ ಬಗೆಯ ಉಡುಪುಗಳು, ಸಿಂಗಾರ ದೇಹಕ್ಕೆ
ಬಣ್ಣ ಬದಲಿದ ಮಾತು ಅದರ ಶೃಂಗಾರಕ್ಕೆ
ಅಂತರಾಳದಲಿ ನೋವು ಕುದಿದು ತಳ ಸೇರಿತ್ತು
ಕಣ್ಣೀರ ಧಾರೆಯಲಿ ತೊಳೆದು ವ್ರಣವಾಯಿತು
ಹೊಟ್ಟು ಕಿತ್ತಾಗೊಮ್ಮೆ ಹಸಿರಕ್ತ ಸುರಿಸಿತು.

ಅದೇ ನೋವು ಅದೇ ನೆನಪು ಅಂತರಾಳದ ಮೊರೆಯು
ಮತ್ತೆ ಮೆಲುಕಾಡುತ್ತಿದೆ ನಗು ತಂದ ನೆನಪು
ಬತ್ತಿದಾ ತೊರೆಯೊಂದು ಮಳೆಗೆದ್ದು ಹರಿದಂತೆ
ಮನದಲ್ಲಿ ಭಾವನೆಗಳ ತುಂಬಿ ತುಳುಕು
ಹರಯದಲಿ ಹರುಷವೆ ಬಾಳ ಹೊನಲು

ಬಲು ಮೋಹದ ಈ ದೇಹ, ಮಾನವನ ಸಂಪತ್ತು
ಆಪತ್ತು ನಿಯತ್ತುಗಳಲಿ ಬಲಿಯುತ್ತ ಬಂತು
ಸುಖದುಃಖ ತಕ್ಕಡಿಯ ತೂಗುತ್ತ ನಡೆದಿತ್ತು
ಮೇಲುಕೀಳಾಗಿ ಜೋಲಾಡಿ ನಡೆದಿತ್ತು
ಒಂದು ನಿಮಿಷವೆ ಸಾಕು ತನ್ನಿರವ ಬಿಡಲು

ಬಚ್ಚಿಟ್ಟ ಭಂಡಾರಗಳು ಭಸ್ಮವಾಗುತಲಿರಲು
ತನ್ನಿರುವ ನೆನಪೊಂದ ಭೂಮಿಗೆ ಬಿಟ್ಟು
ಎಲ್ಲಿ ಹಾರಿತೋ ಆತ್ಮ, ದಿಕ್ಕು ತಿಳಿವವರಿಲ್ಲ
ಪಾಪ ಪುಣ್ಯಗಳನ್ನು ಆರಸಿದವರಲ್ಲಿ
ಬಂದು ಹೋದ ದಾರಿ ತಿಳಿದವರಿಲ್ಲ.

## ಹಾಗೂ ಹೀಗೂ

ನಾನು ಒಮ್ಮೊಮ್ಮೆ
ಹಾಗೂ ಹೀಗೂ ಇರುತ್ತೇನೆ
ಇಲ್ಲದ ಗುಣಗಳನು
ಆಹ್ವಾನಿಸಿ ನಗೆಪಾಟಲಾಗುತ್ತೇನೆ

ಗಂಭೀರ ನಡೆನುಡಿಗಳಲಿ
ತಲ್ಲೀನನಾಗುತ್ತೇನೆ
ಮುಖ ಗಂಟಿಕ್ಕಿ ಯಾರನ್ನೂ
ಗಣನೆಗೆ ತಾರದೆ ಮುನ್ನಡೆಯುತ್ತೇನೆ

ಬಿಗುಮಾನ ತಳೆದಾಗ
ನೆತ್ತಿ ಸಿಡಿಯತೊಡಗುತ್ತದೆ
ಅದಕಾಗಿ ಬಲುಬೇಗನೇ
ಬಣ್ಣ ಕಳಚುತ್ತೇನೆ

ನಸುನಗುವಿನಲಿ
ಎಲ್ಲರಲೊಂದಾಗಿ ಬಂದವರನ್ನು
ಆದರಿಸುತ್ತೇನೆ-
ಕಷ್ಟಸುಖಗಳನರಿತು
ಮರುಗುತ್ತೇನೆ

ಮತ್ತೊಮ್ಮೆ ಪಿಸುನುಡಿಗೂ
ಕಣ್ಣೀರ ಸುರಿಸುತ್ತೇನೆ
ನನ್ನವರು ಯಾರಿಲ್ಲವೆಂದು
ಗೋಗರೆದು ಬದುಕುತ್ತೇನೆ

ನನ್ನ ಗುಣ ಯಾವುದೆಂದು
ಹುಡುಕಾಡುತ್ತೇನೆ
ಸದಾ ಊಸರವಳ್ಳಿಯ ಬದುಕಾಗಿ
ಬೇಸತ್ತಿದ್ದೇನೆ

ನನ್ನನ್ನು ಯಾರೂ
ಗಣನೆಗೆ ತರುವುದಿಲ್ಲ
ಕವಡೆ ಕಿಮ್ಮತ್ತಿಲ್ಲ
ವೆಂದು ಸದಾ ಮರುಗುತ್ತೇನೆ

ಪರ ಅಂಗಿಯ
ತೊಟ್ಟು ಸದಾ ಮೆರೆಯುತ್ತೇನೆ
ನಾನೇಕೆ ಹೀಗೆ ಎಂದು
ಸದಾ ಚಿಂತಿಸುತ್ತಿರುತ್ತೇನೆ

○

## ಗೋರಿ

ನನ್ನ ಹೃದಯದಲಿ ಮೊದಲು
ಕನಸುಗಳೆ ತುಂಬಿದ್ದುವು
ಚಿಲಿಪಿಲಿಯ ಹಕ್ಕಿಗಳಾಗಿ
ಗೂಡು ಕಟ್ಟಿದ್ದವು
ಪುಟ್ಟ ಪುಟ್ಟ ಮರಿಗಳಾಗಿ
ಅತ್ತಿತ್ತ ಸರಿದಾಗ ಎದೆತುಂಬಿ
ಗರಿಗಳಾದುವು
ಹಗಲು ರಾತ್ರಿಯಲಿ ಮೃದು
ಗಾನದಲಿ
ಮನವು ತೇಲುತಲಿತ್ತು
ಅನಂತಾನಂದದ
ತೆರೆಗಳಲಿ ಈಜಾಡುತ್ತಿತ್ತು
ಆದರೀಗ ಆ ಹಕ್ಕಿಗಳ ಗಾನವಿಲ್ಲ
ಗೂಡಿಂದ ಮರಿಗಳೆಲ್ಲೋ
ಹಾರಿಹೋದುವು!
ಎದೆ ತುಂಬಿ ಹಕ್ಕಿಯ
ಹಿಕ್ಕೆ ಪಕ್ಕೆಗಳು
ಈಗದು ಬರೆ ಮರುಳುಗಾಡು
ಕನಸುಗಳೆಲ್ಲಾ ಕಮರಿ

ಸತ್ತು ಹೋದುವು
ಎದೆ ತುಂಬ ಗೋರಿಗಳನು
ಕಟ್ಟಿ ಹೋದುವು
ಗೋರಿಗಳನು ಕಾಯಲೆಂದು
ನಾನುಳಿದಿದ್ದೇನೆ
ಅಲ್ಲಲ್ಲಿ ಬಿದ್ದ ಎಸಳುಗಳನ್ನು
ಆರಿಸಿ ಗೋರಿಗೇರಿಸುತ್ತೇನೆ
ಎಷ್ಟೆಂದರೂ ಪವಿತ್ರವಾದ ಜಾಗ
ಕಾಯುವುದು ಕರ್ತವ್ಯವೆಂದಿದ್ದೇನೆ.

○

# ನಾನು

ನಾನು ಮುಟ್ಟಿದರೆ ಮುನಿ
ಮೆಟ್ಟಿದರೆ ಹಾವು
ಕಚ್ಚಿದರೆ ಕೊಂಡಿ ವಿಷ! ಕರಿಚೇಳು ನೋಡು.

ಹರಿದಾಡುವ ಸರ್ಪ
ಘರ್ಜಿಸುವ ಸಿಂಹ
ಘೀಳಿಡುವ ಆನೆಗೂ ಇಲ್ಲ ನನ್ನಷ್ಟು ದರ್ಪ!

ಅಶ್ವ ಶಕ್ತಿಯು ನಾನು
ವಿಶ್ವ ಶಕ್ತಿಯು ನಾನೆ
ಪ್ರಳಯಕಾಲದಿ ಬರುವ ಸುನಾಮಿ ನಾನೆ!

ಕೊಂದು ತಿನ್ನುವ ಹುಲಿಯು
ಕುಕ್ಕಿ ಕೊಲ್ಲುವ ಹದ್ದು

ಕಚ್ಚಿ ಕೊಂಡೊಯ್ಯುವ ಚಿರತೆ ನಾನೆ!

ಅಬ್ಬರದ ಜಲಪಾತ
ಉಬ್ಬರದ ಸಾಗರವು
ಎತ್ತರದ ಗುಡ್ಡದಾ ಇಳಿಜಾರು ನಾನೆ ಪ್ರಪಾತ!

ಗುಡಿಗಿನಾರ್ಭಟ ನಾನು
ಮಿಂಚಿನಲಿ ಬೆಳಕು
ಸಿಡಿಲಿನಾರ್ಭಟದಲ್ಲಿ ಸುರಿವ ಮುಸಲಧಾರೆ

ಎತ್ತರದಿ ಶಿಖರ ತುದಿ
ಸಮುದ್ರದಾಳವು ನಾನು
ವಿಸ್ತರದಿ ವಿಶ್ವವನು ಅಳೆದುಕೊಂಡೆ

ಬಿರುಗಾಳಿ ಸುಳಿಗಾಳಿ
ಭೂಕಂಪ ಅನುಕಂಪ
ಎಲ್ಲೆಂದರಲ್ಲಿರುವೆ ಬೆಳಕೆ ನಾನು!

ನನ್ನಿರುವು ನಾ ತಿಳಿದೆ
ನೀನೇನ ತಿಳಿದಿರುವೆ
ನನ್ನ ಕಂಡುದು ನಾನೆ ನಿನಕಿಂತ ಮುಂದೆ.



# ಕಾತರ

ಕಣ್ಣುಗಳು ಕುರುಡಾಗಿವೆ
ಕಿವಿಗಳು ಕಿವುಡಾಗಿವೆ
ಹಲ್ಲುಗಳು ತಾ ಮುಂದು ನಾ ಮುಂದೆಂದು
ಕಳಚಿ ಬೀಳುತ್ತಿವೆ, ದಿನಕ್ಕೊಂದರಂತೆ

ಕೈಗಳು, ನಡುಗುತ್ತಿವೆ,
ಮೈ ಮುಖವು ಸುಕ್ಕುಗಟ್ಟುತ್ತಿವೆ
ಕಾಲುಗಳು ಚಲಿಸಲಾರೆವೆಂದು
ಮುಷ್ಕರವ ಹೂಡುತಿವೆ, ಅಲ್ಲಲ್ಲಿ ನಿಲ್ಲುತ್ತಿವೆ

ಬೆನ್ನುಬಾಗಿ ಮುಖ ನೆಲವನ್ನರಸುತ್ತಿದೆ
ಕೂದಲುಗಳು ಒಂದೊಂದಾಗಿ ಜಾರಿ
ಬೀಳುತ್ತಿವೆ, ಬಣ್ಣ ಕಳಚುತ್ತಿವೆ,
ಶರತ್, ಶಿಶಿರ ಕಾಲದ ಒಣ ಎಲೆಗಳಾಗಿ
ಚದುರುತ್ತಿವೆ, ಮತ್ತೆ ಚಿಗುರಿ ನಿಂತಿವೆ!

ನಿದ್ದೆಯಲಿ ಕನವರಿಸುತ್ತೇನೆ,
ಕಳವಳಿಸಿ ಅಳುತ್ತಿದ್ದೇನೆ,
ಕಳೆದು ಹೋದ ಜೀವಿಗಳ ನೆನೆನೆನೆದು
ನನ್ನಿರವನಿಲ್ಲಿ ನೆನೆನೆನೆದು.

ದಿನವೂ ನಿನ್ನ ದಾರಿಯ ಕಾದು ಬೇಸತ್ತಿದ್ದೇನೆ
ಚಾತಕ ಪಕ್ಷಿಯಾಗಿ ಕಾತರಿಸುತ್ತೇನೆ
ಎಂದು ಬರುವುದೋ ಕರೆಯು ಎಂದು
ತುದಿಗಾಲಲ್ಲಿ ನಿಂತು ಕಾಯುತ್ತಿದ್ದೇನೆ

ಇನ್ನೇತಕೆ ಈ ದೇಹ ಇಳೆಯೊಳೆಂದು,
ಬೇಡುತ್ತಲೇ ಬದುಕುತ್ತಿದ್ದೇನೆ,

ನಿನ್ನ ಕರೆಗಾಗಿ ಮೊರೆಯಿಡುತ್ತಿದ್ದೇನೆ
ಸಂತೋಷ ಸಡಗರದಲ್ಲಿಯೇ ಬರುತ್ತೇನೆ.



## ಇವರು ಮಕ್ಕಳು

ಇವರು ಮಕ್ಕಳು ನಮ್ಮ ಎಳೆಯ ಹೂವುಗಳು
ಎಳೆಯಾಗಿ ಬಿರಿದು ಕಂಪ ಸೂಸುವರು
ಇವರು ಮಕ್ಕಳು ಶಾಲೆಗಳಿಗೋಡುವರು
ಪ್ರಾರ್ಥನೆಯ ಮಾಡುವರು
ಕಣ್ಣಂಚಿನಲಿ ಚೇಷ್ಟೆಗಳನು ಮುಚ್ಚಿಡುವರು
ಇವರು ಮಕ್ಕಳು ನಮ್ಮ ಎಳೆಯ ಹೂವುಗಳು

ಪಾಠವನು ಓದುವರು ಕಲಿಯುವರು
ಬರೆದುದೇನೆಂದು ಅರಿಯದವರು
ಇವರು ಮಕ್ಕಳು
ಆಟಗಳನು ಆಡಿ ನಕ್ಕು ನಲಿದಾಡುವರು
ಆಟ ಪಾಠಗಳಲ್ಲಿ ಬದುಕ ಕಲಿಯುತಿಹರು
ಇವರು ಮಕ್ಕಳು

ಕಾಡುವರು, ಬೇಡುವರು
ದಿನಕೊಂದು ಬೇಡಿಕೆಯ ಮುಂದುಮಾಡುವರು
ದೊರಕದಾಗ ಕಣ್ಣೀರ ಹನಿಸಿ ನೋಡುವರು
ಇವರು ಮಕ್ಕಳು

ದುಃಖ ದುಮ್ಮಾನಗಳನರಿಯದವರು, ಮುದುಡು
ರಕ್ತದೋಕುಳಿ ಕಂಡು ನೊಂದು
ಸಾವು ನೋವಿನ ಮೊದಲ ಪಾಠ ತಿಳಿಯುವರು
ಇವರು ಮಕ್ಕಳು

ಒಡನಾಟಗಳಲ್ಲಿ ಅಂತಸ್ತಿನ ಅರಿವಿಲ್ಲದವರು
ನೋವಿನಲ್ಲಿ ಕಾರುಣ್ಯ ತೋರಿ ಸಂತೈಸುವವರು
ಇವರು ಮಕ್ಕಳು ಕಪಟವರಿಯದ ಮುಗ್ದ ಕುಡಿಗಳು

ಜಾತಿಮತ ಭೇದಗಳ ಸೋಂಕಿಲ್ಲದವರು
ಬದುಕೆಲ್ಲ ಹೂವಿನ ಹಾಸಿಗೆಯನ್ನೇರುವವರು
ಒಕ್ಕೊರಲ ಧ್ವನಿಯಲ್ಲಿ ಕಲೆತು ಬಾಳುವವರು
ಇವರು ಮಕ್ಕಳು
ಭಾರತಾಂಬೆಯ ಮಡಿಲಲ್ಲಿ ಬೆಳೆಯುತಿಹರು
ಭವಿಷ್ಯ ಭಾರತವನ್ನು ಕಟ್ಟಿ ಬೆಳೆಸುವವರು.

## ನೇರ ದಾರಿ

ಆ ದಾರಿಯೇ ಹಾಗೆ ಅಂಕು ಡೊಂಕು
ನೇರ ದಾರಿಗೆ ತಲುಪಬೇಕಾದರೆ ದಾಟಬೇಕು
ನೂರಾರು ದಿಬ್ಬ ದಿಣ್ಣೆಗಳ
ಕೆಸರ ತುಂಬಿದ ಕಂದರಗಳ
ಕಲ್ಲು ಮುಳ್ಳಿನ ಹಂದರಗಳ
ಎಲ್ಲಿ ಬಿದ್ದರೂ ಏಳುವುದು ಕಷ್ಟ
ಇಷ್ಟವಿಲ್ಲದೆ ಮುನ್ನಡೆಯಲು
ಮನಕೆ ಆಯಾಸ, ದೇಹಕ್ಕೆ ಕುಸಿತ,
ಕತ್ತಲೆಯಲ್ಲಿಯೂ ಸಾಗಬೇಕು
ಬಿಸಿಲಿಗೂ ಮೈಯ್ಯೊಡ್ಡಬೇಕು
ಯಾರ ಕೇಳಿದರೂ ಹೇಳುವವರಿಲ್ಲ,
ಆ ದಾರಿಯಲಿ ಹೋದವರೆ ಇಲ್ಲವಲ್ಲಾ
ಕಷ್ಟಪಟ್ಟು ಸಾಗಿದರಷ್ಟೆ ದಾರಿ ಸವೆದೀತು
ನೇರ ದಾರಿ ಸೇರಿದಾಗ ನೆಮ್ಮದಿಯಾದೀತು
ಈಗ ಹೇಳು, ಈ ದಾರಿಯಲ್ಲಿ ಬರುತ್ತಿಯಾ
ಅಂಟಿಕೊಂಡು, ಮುಗ್ಗರಿಸಿ ಬಿದ್ದು ಅಳುತ್ತಿಯಾ ಬಂದು.

# ನಿತ್ಯ ವಧು

ನಾನು ನಿತ್ಯ ವಧುವೆ
ಮಂಡಿಯ ತುಂಬ ಹೂವನು ಮುಡಿದು
ಕೊರಳ ತುಂಬ ನಗಗಳ ತೊಟ್ಟು
ಕೈಗಳಲ್ಲಿ ಬಣ್ಣ ಬಣ್ಣದ ಬಳೆಗಳ ತೊಟ್ಟು
ದಿನವೂ ಪಟ್ಟೆ ಸೀರೆಯನುಟ್ಟು ಮೆರೆಯುತ್ತೇನೆ
ಹಲವು ಬಣ್ಣದ ಕನಸುಗಳನ್ನು ಕಾಣುತ್ತಿದ್ದೇನೆ!

ನಾನು ನಿತ್ಯ ಸುಮಂಗಲೆಯೆ!
ಹಣೆಗೆ ಕುಂಕುಮವಿಟ್ಟು
ಚಂದ್ರ ಕಳೆ ನೋಡುತ್ತೇನೆ ಕನ್ನಡಿಯ ಹಿಡಿದು
ಚಿನ್ನದಂತಹ ನನ್ನ ಗಂಡ ಬರುವನೆಂದೋ
ದಾರಿ ಕಾಯುತ್ತೇನೆ ಹಗಲು ಇರುಳು
ಇನ್ನೆಷ್ಟು ಜನುಮಗಳು ಕಾಯಬೇಕೋ
ನಿತ್ಯ ಹಲುಬುತ್ತೇನೆ, ಕಣ್ಣೀರ ಸುರಿಸುತ್ತೇನೆ.

ಯಾಕೆಂದರೆ ನಾನು ಬಾಲವಿಧವೆ,
ಬಾಲ್ಯದಲ್ಲಿಯೇ ಕಟ್ಟಿದ್ದರು ತಾಳಿ ನನಗೆ
ತಿಳಿಯುವ ಮುಂದೆ ಮಾಯವಾದ ಮಸಣದಲ್ಲಿ
ಯೌವನ ಬಂದಾಗ ನಾನು ಹುಚ್ಚಿಯಾದೆ
ಕಿಚ್ಚು ತಾಳದೆ ಎದೆಯಲ್ಲಿ ಬಲು ನೊಂದು ಹೋದೆ

ಈಗ ಕೆಚ್ಚಿನಿಂದಲೇ ಬದುಕುತ್ತಿದ್ದೇನೆ
ವೈಭವವನ್ನು ಕೀಳಬಂದವರನ್ನು

ಕಚ್ಚುತ್ತೇನೆ, ಮಾತುಗಳಿಂದ ಚುಚ್ಚುತ್ತೇನೆ
ಅದಕ್ಕೇ ಕರೆಯುತ್ತಾರೆ ಹುಚ್ಚಿಯೆಂದು
ನಗುತ್ತಾರೆ ಜನ ನನ್ನ ಭವ್ಯವೇಷವ ಕಂಡು

ನಾನು ಮೆಚ್ಚಿದವನಿಗೆ ನನ್ನನ್ನು ಕೊಡಲಿಲ್ಲ
ಎತ್ತ ಸಂಬಂಧವೋ ಕಟ್ಟಿದರು ಬಂಧ
ನಾಲ್ಕು ದಿನಗಳೂ ಕಳೆಯಲಿಲ್ಲ ಮದುವೆಯಾಗಿ
ಮರಳಿ ಬಂದೆ ಮನೆಗೆ ವಿಧವೆಯಾಗಿ!

## ಓ ಬೆಳಕೆ

ಬಾ ಬೆಳಕೆ ನನ್ನೊಳಗೆ
ಬೆಳಗು ನೀ ನನ್ನೆದೆಯ
ಮಬ್ಬು ತುಂಬಿಹುದಿಲ್ಲಿ
ಬೆಳಕ ನೀಡು.

ಎಲ್ಲವನು ತಿಳಿದಿರುವೆನೆಂದು
ಗರ್ವದೊಳು ಮೆರೆದಿಹೆನು
ನಿನ್ನ ತೃಣವಾಗಿಹೆನು ತಿಳಿದೆನಿಂದು

ಎಲ್ಲರೊಡನೊಂದಾಗಿ ನಿನ್ನ
ನಿಂದಿಸುತ್ತಿದ್ದೆ ನಿನ್ನಿರವ
ಮರೆತು ಭೂಮಿಯಲಿ ಮೆರೆದೆ

ಎಲ್ಲರಲೂ ನಿಂದಿರುವ ಶಕ್ತಿ
ನೀನೆಂದರಿತೆ, ಕೊಂಡಾಡಿ

ಬದುಕಲೆನಗೆ ಬದುಕ ನೀಡು

ಕುರುಡಾಗಿ ಜಗದಲಿ ಈ ದಿನ
ಕನವರಿಸುತಿರುವೆ ಕನಿಕರಿಸು
ಓ ತಂದೆ, ಎನ್ನ ಸಲಹು.

# ಊರುಗೋಲು

ಊರುಗೋಲು ಹಿಡಿದು ನಡೆಯುತ್ತಿದ್ದೆ ದಾರಿಯಲ್ಲಿ
ಅಜ್ಜಿ, ಲಾರಿ ಬರುತ್ತಿದೆ, ಬಾ ಇಲ್ಲಿ
ಕೈ ಹಿಡಿದು ದಾಟಿಸುತ್ತೇನ ದಡವನ್ನು
ಎಂದೊಬ್ಬ ಬಾಲಕ ರಟ್ಟೆ ಹಿಡಿದು ರಸ್ತೆ ದಾಟಿಸಿದ
ನಾಲ್ಕು ಹೆಜ್ಜೆಯ ನಡೆದು ಮಗಳ ಮನೆಗೆ ಕಾಲಿಟ್ಟೆ
ಅಮ್ಮಾ ಯಾಕೆ ಬಂದೆ ಈ ಬಿಸಿಲಲ್ಲಿ ಈ ವಯಸ್ಸಿನಲ್ಲಿ
ನಾನೇ ಬರುತ್ತಿದ್ದೆ, ನಿನ್ನನ್ನು ಕಾಣಲಲ್ಲಿ
ನೀರು ಬೇಕೇ, ಗಾಳಿ ಬೇಕೇ ಕುಳಿತುಕೋ ಅಲ್ಲಿ
ಎಂದು ಅಬ್ಬರಿಸಿದಳು, ನಾನು ಹಡೆದ ಒಬ್ಬಳೇ ಮಗಳು,
ಗೂಡು ಹೊಕ್ಕ ಹಕ್ಕಿ ಚಡಪಡಿಸುತಿದೆ ಮಗಳು
ಎಂದು ಹಾರಿ ಹೋಗಲಿ ಎಂದು ದಿನವ ಕಾಯುತಿದೆ
ಮೈನಡುಕ ಹುಟ್ಟಿ, ಕಾಲಿಗೆ ನಡೆಯಲಾರೆನೆಂಬ ಸೊಕ್ಕು
ಕಣ್ಣು ಕುರುಡಿನಲಿ ಕಾಯ ಗುರುತಿಸಲಾರದ ಮಬ್ಬು
ಎದೆಯಲ್ಲಿ ತಿದಿಗಳೊತ್ತಿದ ಸದ್ದು
ಒತ್ತುಗುಳಿ ಬಿದ್ದಿವೆ ಕಾಲುಗಳಲ್ಲಿ, ಬತ್ತಿ ಹೋಗಿದೆ ರಕ್ತ
ಮೈಯ್ಯಲ್ಲಿ
ಕಿವಿಯಲ್ಲಿ ಕೇಳುತ್ತಿದೆ ಮರಣಮೃದಂಗದ ಸದ್ದು
ಮಬ್ಬಿನಲೆ ಕಾಣುತಿಹುದು ಬೆಳದಿಂಗಳ ನೃತ್ಯ
ಅದಕೆ ಬಂದೆ ಮಗಳೆ, ನಿನ್ನ ಕಾಣಲು ಬಂದೆ
ಸಾಯಲಿರುವುದಾದರೂ ಮನಸ್ಸು ಬದುಕನೆನೆಯುತ್ತದೆ
ನಿನ್ನ ಕಂಡು ಹೊರಡುತ್ತೇನೆ, ಮುಂದಿನ ಸಿದ್ಧತೆಗಾಗಿ
ಮನಸ್ಸು ಬಿಗಿಹಿಡಿಯುತ್ತೇನೆ, ಕರೆ ಬಂದಾಗ ಹೊರಡುತ್ತೇನೆ.

# ವಸಂತ ಬಂತು

ನೀನೋದ ಬೇಕೆಂದು ನಾನಿದನು ಬರೆದಿಲ್ಲ
ನಾನು ಬರೆದುದನೆಲ್ಲಾ ನೀನೋದಬೇಕೆಂದಿಲ್ಲಮ್ಮಾ
ಓದಲೂ ಬರೆಯಲೂ ಬಾರದವರಿಗೆಂದೇ
ಹಾಡುಗಳು ಕುಣಿತಗಳು ರಾಗಗಳು ಮೇಳಗಳು

ಹಾಡುವವರೂ ಕುಣಿಯುವರು
ಕುಣಿಯುವವರೂ ಹಾಡುವರು
ತಾಳಕ್ಕೆ ತಕ್ಕಂತೆ ಕುಣಿತ
ಕುಣಿತಕ್ಕೆ ತಕ್ಕಂತೆ ರಾಗ

ಹಾಡುವವರು ಕುಣಿಯುವರು
ಹಾಡದವರೂ ಕುಣಿಯುವರು
ಹಾಡು ಕುಣಿತಗಳಲ್ಲಿ ಮೈಮರೆಯುತಿಹರು
ಮೇಳ ವಾದ್ಯಗಳಲ್ಲಿ ಧ್ವನಿಯೇರುತಿಹುದು

ಸ್ವರವಿಲ್ಲದ ಕಾಗೆ ಕೂಗ ನಿಲ್ಲಿಸಿತೇ
ಕಾಡಿನ ಮಧ್ಯದಲಿ ಕೋಗಿಲೆ ಹಾಡಿದುದೇತಕ್ಕೆ
ಬೆಳಗಾಗೆದ್ದು ಕೋಳಿ ಕೂಗುವುದೇತಕ್ಕೆ
ಗರಿಕೆದರಿ ನವಿಲು ನರ್ತಿಸಿದುದೇತಕ್ಕೆ

ಜಿನುಗು ಮಳೆಯಲ್ಲಿ ನವಿಲು ನರ್ತಿಸಿತು
ಜುಳುಜುಳೆಂದು ನದಿ ನಾದವೆಬ್ಬಿಸಿತು
ಎಳೆಚಿಗುರ ಮರಗಳು ಚಾಮರವ ಬೀಸಿದುವು
ಹಸಿರು ಹುಲ್ಲಿನ ಚಾಪೆ, ರಂಗಮಂಟಪಕೆ

ಗಿಡಮರಗಳೆಲ್ಲಾ ನಿಮಿರಿ ನಿಂತವು
ಮುಡಿ ತುಂಬ ಹೂವನ್ನು ಮುಡಿದು ನಿಂತುವು
ವಸಂತನಾಗಮನವೆಂದು ಎಲೆಯೋಲೆ ಬಿತ್ತಿದುವು
ಸಡಗರದಿ ಸರಿದಾಡಿದವು ಮೃಗಪಕ್ಷಿಗಳು
ತುಂಬಿ ಮರಿದುಂಬಿ ಕಡವೆ ಸಾರಂಗಗಳು
ಒಂದನೊಂದು ಮುದ್ದಿಕ್ಕಿದುವು ನಲಿದಾಡಿದವು
ಎಲ್ಲವೂ ಕಾಡಲ್ಲಿ ಡಂಗುರವ ಸಾರಿದುವು
ವಸಂತನೇ ಬರುತ್ತಾನೆಂದು ಸಜ್ಜಾಗಿರೆಂದು

ಉಕ್ಕೇರಿದುವು ಭಾವನೆಗಳು, ಉಕ್ಕಿ ಹರಿದುವು
ಒಡಲಿನಾಳದಲಿ ಹುದುಗಲಿಲ್ಲ ಹೊರಚಿಮ್ಮಿದವು
ಹಾಳೆಗಳನರಸಿದವು, ಸಾಲುಗಟ್ಟಿದವು
ಹೊಳೆಯಂತೆ, ಝುರಿಯಂತೆ ಧುಮ್ಮಿಕ್ಕಿದುವು.

# ಮದುವೆ

ಮದುವೆ
ಹಳೆಯದಕ್ಕೂ ಹೊಸದಕ್ಕೂ
ಕಟ್ಟಿಕೊಂಡ ಸೇತುವೆ
ನನ್ನ ಕೈಯ್ಯ ಹಿಡಿದಂದಿನಿಂದ
ನನ್ನ ಹೆಜ್ಜೆಗಳೂ ಮೂಡಿವೆ
ಹಲವಾರು ಕನಸುಗಳು ನನಸಾಗಿವೆ
ನೂರಾರು ಚಿಂತೆಗಳು ನೆಲಸಮವಾಗಿವೆ,
ಇಳೆಯಲ್ಲಿ ಕಳೆದಿದ್ದ ಸಾಮ್ರಾಜ್ಯವು
ಮರಳಿ ಬಾಗಿಲಿಗೆ ಬಂದಿದೆ
ನೀ ಬರುವ ಮುಂದು

ಬಾಳಿನೆದುರಿಗೆ ಕಂದರವಿತ್ತು
ಎತ್ತ ನೋಡಿದರೂ ಶೂನ್ಯ ದಿಗಂತವಿತ್ತು
ಹೆತ್ತವರ ಒಡಲಲ್ಲಿ ಚಿಂತೆ
ಹೆಪ್ಪುಗಟ್ಟಿ, ಕಲ್ಲಿನಂತಾಗಿತ್ತು
ತಪ್ಪಿತಸ್ಥನಂತೆ ತಲೆಮರೆಸಿ
ಬದುಕು ಸಾಗುತ್ತಿತ್ತು
ಆದರೆ ಈಗ ಹಾಗಲ್ಲ
ಯಾರ ಮುಂದೂ ತಲೆ ಬಾಗಲ್ಲ,
ನಾನು ಸೇತುವೆಯನ್ನು ದಾಟಿದ್ದೇನಲ್ಲಾ
ಈ ಬಾಂಧವ್ಯದಡಿಯಲ್ಲಿ ಯಾರ
ಹಂಗೂ ಇಲ್ಲದೆ ಬಾಳಬಹುದಲ್ಲಾ?

○

## ಗಡಿಯಾರದ ಮುಳ್ಳು

ಆ ಮುಳ್ಳು ಅಲ್ಲಿಂದ ಅಲುಗಾಡಲಿಲ್ಲ
ಎಷ್ಟೋ ಹೊತ್ತಿನಿಂದ ನೋಡುತ್ತೇನೆ ಅಲ್ಲೆ ನಿಂತಿತ್ತು!
ಇನ್ನೂ ಸಮಯವಾಗಿಲ್ಲ ದೂಡಬೇಕು ಮುಂದಕ್ಕೆ
ಮುಗಿಸಬೇಕು ಈ ದಿನದ ಚಾಕರಿ! ದಿನಚರಿ.

ಎಷ್ಟು ಗಂಟೆಯೋ ಒಂದು ದಿನಕ್ಕೆ!
ಎಷ್ಟು ನಿಮಿಷಗಳೋ ಒಂದು ಗಂಟೆಗೆ
ಎಷ್ಟು ಕಾದರೂ ಮುಂದಕ್ಕೆ ಹೋಗಲಿಲ್ಲ ಆ ಮುಳ್ಳು
ಕಳ್ಳು ಮನಸಿನಲಿ ನಿಂತಿತೆ ಏನೇನೋ ಕನಸು
ಎಲ್ಲೆಲ್ಲೋ ಹೋಗಬೇಕು ಏನೇನೋ ಕೆಲಸಗಳು

ಜೀವನುದ್ದಕ್ಕೂ ಈ ಮುಳ್ಳು ನಡೆಯಬೇಕು
ನಡೆದಷ್ಟೂ ಬದುಕಿನ ದಾರಿ ಸವೆಯುತ್ತಿರಬೇಕು

ಕೊನೆಗೊಮ್ಮೆ ಗುರಿಯ ಮುಟ್ಟಬೇಕು
ದಾರಿ ನಡೆದು ವಿಶ್ರಾಂತಿ ಸಿಗಬೇಕು!

ಮುಳ್ಳು ನಡೆಯಲಾರದಿದ್ದರೇನು?
ಕಾಲ ಸರಿಯುತ್ತಿದೆಯಲ್ಲಾ!
ಕೊನೆಗೊಮ್ಮೆ ಸೇರಿಸುತ್ತಿದೆ ಕಾಲನಾ ಕಡೆಗೆ
ನಡೆಯಬೇಕು ನಾನು ಅಲ್ಲಿಯವರೆಗೂ
ನಡೆದಾಡದ ಮುಳ್ಳುಗಳ ನಂಬಬೇಕು

ಬಿರುಕು ಬಿಟ್ಟರೂ ಬಾಳು, ಕೆಟ್ಟು ನಿಂತರೂ ಹಾಳು
ಹೆಸರಿನ್ನು ಬರೆಬರೆದು ಅಳಿಸಬೇಕು
ಮನಸಿನಾಣತಿಯಂತೆ ನಡೆಯಬೇಕು
ಕಾಲಗರ್ಭದಲೊಮ್ಮೆ ಹೂತು ಹೋಗುವತನಕ
ಗೋರಿಯಲಿ ಹೆಸರೊಂದು ಕಾಣುವಾ ತವಕ

ನಿಷ್ಠುರ, ದುಮ್ಮಾನ, ಹಿಂಸೆ, ಮತ್ಸರ
ಮಾತಾಡಿದಾಗಲೆಲ್ಲಾ
ಆ ಮುಳ್ಳು ಗಡಿಯಾರ ನಡೆಯುತ್ತಲಿತ್ತು
ಸ್ನೇಹದಲಿ, ಪ್ರೇಮದಲ್ಲಿ ಬದುಕಿದಾಗಲೂ
ಗಡಿಯಾರ ಮುಳ್ಳು ಧ್ವನಿಸುತ್ತ ಬಂತು

ನಡೆದಾಡುವ ಮುಳ್ಳೆ ಮುಂದಕ್ಕೆ ಹೋಗು
ಸಮಯ ದಾಟಿಸು, ದಡವ ಕಾಣಿಸು
ನಿಂತಲ್ಲಿ ನಿಲಬೇಡ ನೆಲೆಯ ಕಾಣಿಸು
ನೀನು ನಡೆದರೆ ತಾನೆ ನಾ ಹಿಂದೆ ಬರುವುದು.



# ಅಂತರಂಗದ ಪೂಜೆ

ಗುಡಿಗೋಪುರವಿಲ್ಲದಂದು ಒಡವೆ ವಸ್ತು ಕಾಣದಂದು ಹಣ-
ಕಾಸು
ಸೋಕದಂದು ದೇವರನ್ನು ಭಜಿಸಿ ಒಲಿಸಬಹುದು
ಭಕ್ತಳಾಗುವೆ ಜಗದಿ ನಿತ್ಯ ನಿನ್ನನ್ನು ಭಜಿಸಿ
ಭಕ್ತಿ ಮಾರ್ಗದಿ ನಿನ್ನ ಹೃದಯವನು ತಣಿಸಿರಿ!
ಹೃದಯ ಮಂದಿರವಾ ತೊಳೆದು ಬೆಳಗುವೆತಂದೇ
ನಿನ್ನ ಮೂರ್ತಿಯನಿಟ್ಟು ಪುಷ್ಪ ಪೂಜೆಯಗೈವೆ
ಭಕ್ತಿ ಭಾಷ್ಪದಿ ನಿನಗೆ ಸ್ನಾನಗೈಯುವೆ ದೇವಾ
ಪ್ರೇಮ ಭಾಷ್ಪದಿ ನಿನ್ನ ಚರಣವನು ತೊಳೆದೂ
ಸತ್ಯ ಪುಷ್ಪವು ನಿನಗೆ ನ್ಯಾಯ ತೀರ್ಥವು ಎನಗೆ
ಸತ್ಯ ಜ್ಯೋತಿಯ ಬೆಳಗಿ ಪುಷ್ಪ ಪೂಜೆಯಗೈವೆ
ಹಣ್ಣು ಕಾಣಿಕೆಯನೀಯೆ ಹಣಕಾಸ ನಾಕಾಣೆ
ದೆವ್ವ ದೇಗುಲದಲ್ಲಿ ನಿನ್ನ ರೂಪವ ನಾಕಾಣೆ
ಚಿನ್ನದೊಡವೆಯನೀಯೆ ಶಕ್ತಿ ಸಾಲದು ತಂದೆ
ಹೃದಯದೊಡವೆಯ ನಿನಗೆ ನೀಡುವೆನು ಮನಸಾರೆ
ಬಡವ ಬಲ್ಲಿದನೆಂಬ ಭೇದವನು ನೀ ತೋರೆ
ಬಡತನವು ಸಿರಿತನವು ಹೃದಯದೊಳು ನೀ ತಿಳಿಯೆ
ನಿನ್ನ ನಾಮವ ನೆನೆದು ಬಳಲಿ ಬಾಡುವರೇಕೋ
ನಿನ್ನ ಗುಣವನರಿಯದೆಯೆ ಮನದಲ್ಲಿ
ಭಕ್ತ ತಾನೆಂದು ಭಕ್ತಿ ತನ್ನಯ ಮಾರ್ಗ
ಎಂದು ನುಡಿಯುವ ಮನುಜರೊಳು ಭಕ್ತಿ ನಾ ಕಾಣೆ
ತೊರೆಯ ತೋಡುಗಳಲಿ ಸ್ನಾನಗೈಯುತ ಬಂದು
ಎಲ್ಲರನು ಬೈಯುವನು ಭಕ್ತನವನೇನು

ಅನ್ನದೂಟವ ತೊರೆದು ಸ್ನಾನ ತೀರ್ಥವಗೈದು
ಮೋಕ್ಷ ಸಾಧನೆಯೆಂದು ಹಿಗ್ಗುವರು ಮನದಲ್ಲಿ
ಕೊರವ ಶೂದ್ರನು ಎಂದು ಹೌಹಾರಿ ಹೋಗುವರು
ಜಾತಿಭೇದವ ತೊರೆಯೋ ಎಂದು ಮೊರೆ ತಾನಿಡುತ
ಸತ್ಯ ನ್ಯಾಯವು ಮಂತ್ರ ಹಿಂದು ಜನತೆಗೆ ನಮ್ಮ
ಎಂದು ಮಡಿಯುವರು ಎಲ್ಲು ಅನ್ಯಾಯ ಮಾರ್ಗದೊಳು
ಏನಾದರೇನೆಮಗೆ ದೇವ ನೀನರಿತಿರುವ
ಎಲ್ಲವನು ಕಂಡಿಂದು ನಗುತಿರುವೆ ನೀ ಮನದಿ
ತೆರೆಯ ಬಾರದೆ ತಂದೆ ಕಣ್ಣನೊಮ್ಮೆಯು ಕಂಡು
ಕರೆದೊಮ್ಮೆ ಕೇಳವರಾ ಕಪಟ ಮೋಸಗಳಾ
ಎಳತಾಗಿ ಬೆಳೆದಿರುವ ಎಳೆ ಚಿಗುರು ನಾನಿಂದು
ಬೆಳೆ ಬೆಳೆದು ಫಲವಾಗಿ ಬೆಳೆಯ ಬೇಡವೆ ದೇವಾ
ನಿನ್ನ ಚರಣವನು ಪಿಡಿದು ಅತ್ತು ಬಳಲಿದೆ ದೇವಾ
ಎತ್ತಿ ಪಿಡಿದಿಂದೆನ್ನ ಸಲಹ ಬಾರದೆ ತಂದೆ
ಚರಣವನು ನಾ ಪಿಡಿವೆ ಎನ್ನ ಬಾಳಿನ ಬಲದಿ
ಬಿಡದೆ ಭಜಿಸುತಲಿದ್ದೆ ಕರುಣೆದೋರೈ ತಂದೆ
ಕರುಣಾಬ್ಧಿ ಕರುಣಾಮಯ ಕರುಣಾಕರನೆಂದು
ಭಜಿಸಿ ಪಡೆದೆನು ಫಲವ ಎಂದೆಂದು ಮಾಗದದು
ಜೀವನದ ಸರ್ವಸುಖ ಕಳೆದಾಯ್ತು ಎನಗಿಂದು
ಇನ್ನೇನು ಉಳಿದಿಹುದು ಮರಣವಲ್ಲದೆ ಹೊರತು
ಇನ್ನಾರು ಗತಿಯೆನಗೆ ತೋರೋ ಮೈಕೈ ದೋರಿ
ಬಿಡದೆ ಭಜಿಸಿದ ಫಲವನುಣುತಿಹೆ ನಾನಿಂದು
ಇನ್ನಾರು ಭಜಿಸದಿರಿ ಬಾಳಿದುವೆ ಸಾಕ್ಷಿ.

# ವಿದಾಯ

ಯಾರದು ಬಾಗಿಲು ಬಡಿದದ್ದು, ಈ ಮುಂಜಾವಿನಲ್ಲಿ?
ಓಹೋ ನೀವೋ ಬನ್ನಿ ಬನ್ನಿರಿ.
ನೀವೇ ಎಂದು ಅಂದುಕೊಂಡೇ ಬಂದೆ
ಅಲ್ಲಿಯೇ ಕುಳಿತುಕೊಳ್ಳಿ, ಅದೂ ಇದು ಮಾತಾಡಿಕೊಳ್ಳಿ
ಚಾ, ಕಾಫಿ, ಹಾರ್ಲಿಕ್ಸು
ಬಿಸಿ ದೋಸೆ, ಉದ್ದಿನವಡೆ
ಈಗಲೇ ಬರಬೇಡಿರಿ ನಿಮಿಷ ತಾಳಿ
ನಾನಿನ್ನೂ ತಿಳಿಸಿಲ್ಲ ಒಳಗೆ
ಇಂದು ನೀವು ಬರುತ್ತೀರಿ ಎಂದು
ನಾನು ನಿಮ್ಮೊಡನೆ ಹೊರಡುತ್ತೇನೆ ಎಂದು
ಏಳು ಬಾರಿ ನೀವು ಕರೆದದ್ದನ್ನು
ಈ ಬಾರಿ ನಾನು ಬರುತ್ತೇನೆ ಎಂದದ್ದನ್ನು
ನಿಧಾನವಾಗಿ ಸಮಾಧಾನದಿಂದ ಹೇಳಿಬರುತ್ತೇನೆ
ಹೇಳದೇ ಕೇಳದೆ ಹೊರಟೆನೆಂದರೆ
ದೊಡ್ಡ ರಂಪವೇ ಆಗುತ್ತದೆ ಈ ಮನೆಯಲ್ಲಿ
ಯಾಕೆ ನಮಗೆ ಹೇಳಲಿಲ್ಲ? ನಾವೇನು ಅನ್ಯರೇ?
ಅಪಯಾತ್ರೆಗೆ ಯಾಕೆ ಹೊರಟೆಯಪ್ಪಾ?
ನಾವೇನು ಅನ್ಯಾಯ ಮಾಡಿದ್ದೇವೆ ನಿಮಗೆ
ಎಂದು ಎಲ್ಲರೂ ರೋಧಿಸುತ್ತಾರೆ, ಅಜ್ಞಾನಿಗಳು
ಅದಕ್ಕೇ ನನ್ನೆಲ್ಲ ವಹಿವಾಟುಗಳನ್ನು ತಿಳಿಸಿ
ನಿಮ್ಮ ಹಿಂದಿನ ಕರೆಗಳನ್ನು ಸೂಕ್ಷ್ಮದಲಿ ತಿಳಿಸಿ
ಎಲ್ಲರಿಂದಲೂ ಬೀಳ್ಕೊಂಡು ಬರುತ್ತೇನೆ
ಆಗ ನಿಶ್ಚಿಂತೆ, ಹಾಗೇ ಕೂತಿರಿ ಇಲ್ಲಿ

ಬೇಕಾದರೆ ಅಗಳಿ ನೀವೇ ಹಾಕಿಕೊಳ್ಳಿ
ಬರೇ ಗಳಿಗೆಯೊಳಗೆ ಬಾರದಿದ್ದರೆ ನೀವೇ ಬನ್ನಿರಿ
ಒಳಗೆ–
ನೇರ ಬನ್ನಿರಿ ನನ್ನ ಬಳಿಗೆ ಸರಿಯೇ?
ಬರುತ್ತೇನೆ ಗಳಿಗೆಯಲಿ ಕಾದು ಕುಳಿತಿರಿ ಇಲ್ಲಿ.

## ಕನಸುಗಳು

ಕತ್ತಲಲ್ಲೂ ಓಡುತಿಹೆಯಲ್ಲಾ
ಕಣ್ಣು ಕಿವಿ ದೇಹವಿಲ್ಲದೆ ನೀನು
ಎಡವುದಿಲ್ಲ ಕೆಡವುದೂ ಇಲ್ಲ
ಅತ್ತಿತ್ತ ನೋಡುವುದೂ ಇಲ್ಲ
ಭಯವಿಲ್ಲ ಗಾಂಭೀರ್ಯ
ದೊತ್ತಾಸೆಯಲಿ ಓಡುತಿಹೆಯಲ್ಲಾ
ನೀನಿದ್ದಾಗ ಹತ್ತಾರು ಚಿತ್ರಗಳು ಮೂಡುತಿವೆ
ನೂರಾರು ಕನಸುಗಳು ಕುಣಿಯುತಿವೆ
ಸಾವಿರ ಹೆಜ್ಜೆಯನಿಟ್ಟರೂ ಆಯಾಸವಿಲ್ಲ
ಬಯಕೆಗಳಿಗೆಲ್ಲಾ ನೀನೆ ಮೂಲ
ಬಸವಳಿದಾಗ ನೀನೆದಿಕ್ಕು
ಮನಕೆ ಏನೋಮುದವ ಕೊಡುವೆ।
ಅರೆಗಳಿಗೆ ನಾನೂ ನಕ್ಕು ನಲಿವೆ।
ಕನಸೇ ನೀನು ನನ್ನಯ ಕೂಸು
ಮನಸಿನಾಳದ ತಿನಿಸು
ಮನಕೆ ನೆಮ್ಮದಿ ತರುವೆ
ನಿನ್ನಾಟದಲಿ ನನ್ನನ್ನು ನಾನೆ ಮರೆವೆ।

ನೀನು ಜೀವನದ ಸಂಗಾತಿ
ನೀನಿಲ್ಲದಿರೆ ನನಗೆಲ್ಲಿ ಶಾಂತಿ
ನೀನು ನನಗುಸಿರು ಹಸಿರು
ನೀನಿಲ್ಲದಿರೆ ಬಾಳೆಲ್ಲ ಬರಿದು।
ಕಾದಾಡಿ ಹೋರಾಡಿ ಗೆದ್ದ ಮನಕೆ
ಆಸರೆಯು ನೀನೆನಗೆ ಬೇಸರವೇತಕೆ
ನಿದ್ದೆಯಲಿ ನೀಬರುವೆ, ನಿನ್ನನಾ ತಬ್ಬಿರುವೆ
ದಿನವೂ ಬಳಿ ಬಂದು ಎಷ್ಟೆಂದು ರಮಿಸುವೆ।
ತಬ್ಬಿರುವೆ ನೀನನ್ನ ನೆತ್ತಿ ಮುದ್ದಾಡುವೆ
ಹಗಲ ಕನಸುಗಳು ನನಸಾಗಿಸುವೆ
ದಿನವೂ ಒಮ್ಮೆ ಮತ್ತೊಮ್ಮೆ
ತೊರೆಯಬೇಡ ನನ್ನ ನೀನಲ್ಲವೆ ನನ್ನ ಇನಿಯ
ನೀನಿಲ್ಲದೆ ನಾನಿಲ್ಲ, ನಾನಿಲ್ಲದೆ ನೀನಿಲ್ಲ
ಬಾಳಿನಲಿ ಇಬ್ಬರೂ ಸುಖಿಸೋಣ ಬಾ ।

# ಒಂದಾಸೆ

ಒಂದಾಸೆಗಾಗಿ ಬದುಕುಳಿದೆ ನಾನು
ಪೂರೈಸು ತಂದೆ ಸಾಕಾರಮಾಡು
ನಿನ್ನ ಸೃಷ್ಟಿ ಸೌಂದರ್ಯವನು ನಾ ನೋಡಬೇಕು
ಮನಸಾರೆ ನಾನೋಡಿ ತೃಪ್ತಿ ಪಡಬೇಕು
ಹತ್ತಾರು ಗುಡ್ಡಗಳು, ಶಿಖರಗಳನೇರಿ
ನೂರಾರು ನದಿಗಳು, ನದಗಳನು ಹಾದು
ಸಾವಿರಕೂ ಮೇಲ್ಪಟ್ಟ ವೃಕ್ಷ ಜಾತಿಗಳ ನಡುವೆ
ಕೋಗಿಲೆಯ ಇಂಚರವ, ಪಕ್ಷಿಗಾನ ಕೇಳಿ
ನವಿಲಿನ ಕೇಕೆಯ ಧ್ವನಿ, ನರ್ತನವ ನೋಡಿ
ಕಿವಿಯ ಸನಿಹದಲಿ ದುಂಬಿಯ ಝೇಂಕಾರ ಮೋಡಿ
ಹನಿಮಳೆಯ, ಬಿಸಿಲು ತುಂತುರು ಧಾರೆ
ಝರಿಗಳಾರ್ಭಟದಲ್ಲಿ ಪನ್ನೀರ ಹನಿಯು
ಬಾನಿನಲಿ ಮೂಡಿಸುವ ಚಿತ್ತಾರ ಮೋಡಗಳು
ರಂಗು ರಂಗೇರುವ ಸಂಜೆಗೆಂಪು, ಮನಕೆ ತಂಪು
ನೇಸರಿನ ಚೆಲ್ಲಾಟ, ಬಾನಿನಲ್ಲಿ ರಂಗಿನಾಟ
ಗೋಧೂಳಿಯ ಸೊಗಸು, ಪಶ್ಚಿಮದಿ ಚಿತ್ತಾರ
ಕಳ್ಳ ಹೆಜ್ಜೆಯಲಿ ಮೇಲಕೇರುವ ಚಂದಿರ
ಕದ್ದು ನೈದಿಲೆಗಳ ಮುಸುಕು ಸರಿಸಿ ಸೆಳೆಯುವಾಗ
ಲಜ್ಜೆಯಿಂದಲಿ ಮುಖವ ಅರಳಿಸುವ
ನಿನ್ನ ಸೃಷ್ಟಿಯಲಿ ಯಾವುದಿಲ್ಲ ಹೇಳು?
ಪ್ರತಿಸೃಷ್ಟಿಯನು ಮಾಡಲಿಲ್ಲವೆ ನಾನು
ದೃಷ್ಟಿದೋಷವು ನನಗೆ, ಭಗ್ನಮನಸ್ಸಿದೆ ಒಳಗೆ
ಗರ್ವಿಷ್ಟಳಾಗಿ ಬಾಳುವುದ ಕಲಿತೆ ಕೊಳೆತೆ
ಗಳಿಸುವಾರ್ಭಟದಲಿ ನಿನ್ನಿರವ ಮರೆತೆ
ಅದಕಾಗಿ ನೊಂದೆ, ಬೆಂದೆ, ಸಣ್ಣಾಗಿಹೋದೆ
ಉಣ್ಣದ ದೇವರಿಗೆ ನೈವೇದ್ಯ ತಂದೆ,

ಉಣ್ಣಲಿಲ್ಲದವನನ್ನು ಬಡಿದೋಡಿಸಿದೆ
ಬಟ್ಟೆಯುಟ್ಟವರಿಗೆ ವಸ್ತ್ರದಾನವಕೊಟ್ಟೆ
ಹರುಕು ಬಟ್ಟೆಯ ತಿರುಕನನ್ನು ಕಡಿ ಹೊಡೆದೆ
ಇದನೆಲ್ಲಾ ನೆನೆದು ಈ ಬಾಳ ನೊಂದೆ ಬೆಂದೆ
ಇನ್ನಾದರೂ ಬದುಕಿ ಬಾಳಬೇಕು
ನಿನ್ನೊಲವಿನಲಿ ನಾನೇ ಮುಂದಿರಬೇಕು

## ಹೊಂಗಸನು

ಕನಸೊಂದ ನಾ ಕಂಡೆ ಸೊಗಸಾಗಿತ್ತು ನನಗೆ
ಕನಸಿನಲಿ ಮನಸೆಲ್ಲ ಅಲೆದಾಡುತ್ತಿತ್ತು; ಕುಣಿಯುತ್ತಿತ್ತು ಹೊರಗೆ
ಕೈತುಂಬ ಕಾಸಿತ್ತು ಗಿಲ್ ಗಿಲ್ ಅನ್ನುತ್ತಿತ್ತು
ಮೈಮನಕೆ ಮುದವಿತ್ತು, ಮದುವೆಯಾಗಿತ್ತು
ಮಡದಿ ಸುಂದರಿ, ಸುಕುಮಾರಿ, ನನ್ನ ಕೈಹಿಡಿದವಳು
ನಸುನಗುವಿನಲೆ ನನ್ನ ಮನವಗೆದ್ದವಳು
ಬಂಗಾರ ಮೈಬಣ್ಣ, ಚಿಗರೆಯ ಕಣ್ಣು
ಕಿಲಕಿಲನೆ ನಕ್ಕಾಗ ಮನದಲ್ಲಿ ಸೊಕ್ಕು
ಮನೆತುಂಬ ಧಾನ್ಯಗಳು ರಾಶಿ ರಾಶಿ
ಮೊಗೆಮೊಗೆದು ಹಾಕಿದರೂ ಮುಗಿಯದ ರಾಶಿ
ಮನೆಯ ಮಾಡಿಯಲಿ ನನ್ನರಮನೆ, ಅಲ್ಲೆ ಅರಗಿಣಿಯು
ಎತ್ತೆತ್ತಲೂ ಪರದೆ, ಮಿಂಚು ದೀಪಗಳು
ದೇಶವಿದೇಶಗಳ ಶ್ವಾನಗಳು, ಕೂಟಗಳು, ನೋಟಗಳು,
ದೂರದರ್ಶನಗಳು ಪ್ರದರ್ಶಿಸಿದುವು ನನ್ನ ಮುಂದೆ
ಮೆತ್ತನೆಯ ಗಾದಿಗಳು ಬಿತ್ತು ದಿಂಬುಗಳು
ಸುತ್ತಲೂ ಸುಳಿಯುತಿರುವ ಚಾಮರಗಳು
ಎತ್ತ ನೋಡಿದರೂ ತಿಂಡಿ ತಿನಿಸುಗಳೆ ನನಗೆ
ಸತ್ತಮೇಲೆಯೂ ನನಗೆ ಸ್ವರ್ಗಸುಖವೋ

ಎಚ್ಚರವಾಯಿತಲ್ಲಾ ಈ ತಿಗಣೆ ಕಾಟದಲ್ಲಿ
ಮುರುಕು ಮನೆ, ಹರುಕು ಚಾಪೆ ಮಧ್ಯದಲ್ಲಿ
ಬರಿಹೊಟ್ಟೆ, ಚುರುಚುರುಗುಟ್ಟುತ್ತಿತ್ತು
ಬಂಗಾರ ಮಂಟಪವು ಮುರಿದು ಬಿತ್ತು ಹುಸಿಯಾಗಿಬಿತ್ತು
ಬಯಸಿದುದು ಬಂತಲ್ಲ, ಕನಸಾದರೇನು।
ನನಸಿಗೂ ಕನಸಿಗೂ ವ್ಯತ್ಯಾಸವೇನು
ತಿನಸಿಗೂ, ಬಾಯಿಗೂ ಇರುವಷ್ಟು ಮಾತ್ರ.

## ಕತ್ತಲು– ಬೆಳಕು

ಕತ್ತಲಲ್ಲಿ ಕಾಣಲಿಲ್ಲ
ಕವುಚಿಬಿದ್ದೆನು
ಕಣ್ಣುಕಣ್ಣುಬಿಟ್ಟರೆಲ್ಲಾ
ಕೈಯ್ಯಕೊಡದೆಯೆ!
ಬೈದು ಬೈದು ಹಂಗಿಸಿದರು
ಬಂಧು ಬಳಗ ಮಾತಲಿ
ಏಳಲಿಲ್ಲ ನಾನುಮೇಲೆ
ಕೇಳಲಿಲ್ಲ ಯಾರನ್ನೂ
ಹರಿದ ಪಂಚೆ, ಬಟ್ಟೆಗಳನ್ನು
ಮನದಿ ಕಟ್ಟಿ ಭಾವನೆಗಳಿದು
ತುಂಬಿಕೊಂಡೆ, ಹಮ್ಮಿಕೊಂಡೆ
ಕೆಂಡವಾದೆ ಮನದಲಿ।
ಎದ್ದು ಬಂದೆ ಕೊಡವಿಕೊಂಡೆ,
ಪಥಿಕನಾಗಿ ಮುಂದೆನಡೆದೆ,
ಸಿಕ್ಕದೆಲ್ಲಾ ಸಾಕು ಎಂದೆ
ಕಂಡದೆಲ್ಲಾ ದೋಚಿಕೊಂಡೆ
ಉಂಡುಟ್ಟು ಬೆಳೆದು ನಿಂತೆ

ಕಣ್ಣು ಬಿಟ್ಟು ನೋಡಿಕೊಂಡೆ ಈ ಜಗವನು
ಹರಿದ ಪಂಚೆ ಮಾಯವಾಯ್ತು
ಕೈಯ್ಯಲ್ಲಿಷ್ಟು ಕಾಸಾಯ್ತು
ಮೈಮನವು ಅರಳಿ
ಬಂಧುಗಳೂ, ಬಂದರಲ್ಲಾ
ನೀನೆ ನಮ್ಮ ಬಳಗವೆಂದರು
ನಾನೆ ನಿನ್ನ ದಾತರು
ಬೆಳಕಾಗಿತ್ತು ಎಡವಲಿಲ್ಲ
ಎಲ್ಲಿಯೂ ಬೀಳಲಿಲ್ಲ
ಕೊಡವಿಕೊಂಡೆ ವಸ್ತ್ರಗಳನು
ಮುಂದಕ್ಕೆ ನಡೆಯಲೆಂದು
ಹಿಂದಿರುಗಿ ನೋಡಲಿಲ್ಲ
ಬಂಧುಗಳನೂ ತಬ್ಬಲಿಲ್ಲ.

## ನಾನೊಂದು ಮರ

ನಾನೊಂದು ಮರ
ನನಗಿದೆ ಧೈರ್ಯ ಸ್ಥೈರ್ಯ
ಬಿಸಿಲು ಮಳೆಗಾಳಿಗಳು
ಎಷ್ಟು ರೂಢಿಸಿದರೂ
ಸ್ಥಿರವಾಗಿ ನಿಲ್ಲುವ ವೀರಯೋಧ।
ಹಚ್ಚ ಹಸಿರಾದಾಗ
ಕೊಚ್ಚಿಕೊಲ್ಲುವರು
ಹೂ ಬಿಟ್ಟು ನಲಿದಾಗ
ಕಿತ್ತು ಕೊಳ್ಳುವರು
ಹಣ್ಣು ಕಾಯಿಗಳನೆಲ್ಲಾ

ಕಚ್ಚಿ ತಿನ್ನುವರು।
ಕೊಂಬೆ ರೆಂಬೆಗಳನ್ನು
ಕಡಿದು ಕೊಯ್ಯುವರು
ಕಾಲ್ಮುರಿದು ಬಿದ್ದರೂ
ಎತ್ತಿಕೊಳ್ಳರು ನನ್ನ
ಮಳೆಯಾರ್ಭಟಕೆ
ಬೋಳಾಗುವೆನೊಮ್ಮೆ
ಗಾಳಿಯಾಟಕೆ ಬಸವಳಿವೆ
ನೀರಿನಾಟದಲ್ಲಿ ಮುಳುಗೇಳುವೆ
ಆದರೂ ನಾನಿಲ್ಲಿ ಸ್ಥಿರದಿ ನಿಂತಿರುವೆ ನೋಡು
ಒಂಟಿಯಾಗಿದ್ದೇನೆ
ಭಯದಲ್ಲಿ ನಾನು ಈ ಬಯಲಲ್ಲಿ
ಬಂದು ಹೋದರು
ಹಿಂದು ಮುಂದಿನವರೆಲ್ಲಾ
ಒಂದು ಕಾಡಿನ ಮಧ್ಯೆ
ಬೆಳೆದು ನಿಂತಿದ್ದೆ
ಹೋರಾಡಿ ಹಾರಾಡಿ
ಬದುಕುತ್ತಿದ್ದೇನೆ
ವೀರ ಯೋಧನಕತೆಗೆ
ಗಾಥ ನಾನೇ
ನಾನೇಕೆ ಸಾಯಲಿ
ಸೋಲನೊಪ್ಪಲಿ
ಕಾದಾಡಬೇಕು ಕೊನೆಯುಸಿರಿನ ತನಕ
ಹಾಗೆ ನಿಂತಿದ್ದೇನೆ ಮರವಾಗಿ ಇಲ್ಲಿ.



# ನಿತ್ಯವೂ ಬಂದು ಹೋಗು ವಸಂತ

ವಸಂತವೇ ನೀನು ಹಿಂತಿರುಗಿ
ಹೋಗಬೇಡ
ಈ ಚೆಲುಮೆ, ಚೆಲುಮೆಯನ್ನು
ಕೊಂಡೊಯ್ಯಬೇಡ
ಬಿರಿದುನಿಂತ ಕುಸುಮಗಳು
ಬಾಡಿ ಹೋಗುವವು
ಹರಿಯುತಿರುವ ಕಿರುತೊರೆಗಳು
ಬತ್ತಿಹೋಗುವವು
ಚಿಲಿಪಿಲಿಯ ಪಕ್ಷಿಗಳು
ಮೂಕವಾಗುವವು
ನಿನ್ನ ಬರುವಿಗಾಗಿ ಕಾತರಿಸಿದ
ಗಿಡಮರ ಬಳ್ಳಿಗಳು
ಟಿಸಿಲೊಡೆದುಹಸಿರಾಗುವವು
ಕಾಡೆಲ್ಲಾ ಹಸಿರು ಹೊದ್ದು
ಬಸಿರಾಗುವವು
ನಿನ್ನಾಗಮನಕೆಂದು ನವಿಲುಗಳು
ನರ್ತಿಸುವುವು
ಶುಕಪಿಕಗಳು ಹರುಷದಲಿ
ದನಿಯನೆತ್ತುವವು
ಕೋಗಿಲೆಯ ಕಂಠದಲಿ
ಧ್ವನಿಯೇಳುವುದು
ಕೂಗುತ್ತ ನಿನ್ನಾಗಮನವ
ಜಗಕೆ
ಚೇತನದ ಚಿಲುಮೆ ನೀನು
ನೀನು ಹೋದರೆ ಮತ್ತೆ ನಿಟ್ಟುಸಿರು
ಬರೆಬಿಸಿಲು ನೋಡು
ನಿತ್ಯವೂ ಬಂದು ಹೋಗುವಸಂತವೇ
ಜೀವ ಸಂಕುಲವ ಹರಸು, ತಣಿಸು.

# ಸಪ್ತಪದಿ

॥ ಸಪ್ತಪದಿ ತುಳಿದಾಗ
ಸಪ್ತಾಸೆಗಳ ಹೊತ್ತೆ ಮನದಲ್ಲಿ
ಸತಿಪತಿಯರಾಗಲಿಕೆ
ಏಳು ಹೆಜ್ಜೆಯ ನಿಟ್ಟೆ
ಸಖಿಸಖರು ನಾವಾಗಿ ಬಾಳಲೆಂದು
ನಿನ್ನ ಪ್ರೀತಿಯ ನಡುವೆ
ಬಾಳ ಚುಕ್ಕಾಣಿ ಹಿಡಿದೆ
ಹಂತ ಹಂತಕೂ ನಡೆ ಬಾಳದೋಣಿಯಲ್ಲಿ
ಸುಖ ದುಃಖ ಸಮ್ಮಿಶ್ರಣವ
ಸಮನಾಗಿ ಹಂಚುತಲಿ
ಬಂದು ನಿಂತೆವು ನಾವು ನದಿ ದಂಡೆಯಲ್ಲಿ
ನಿನ್ನಿರವು ನನ್ನಿರವು
ನನ್ನುಸಿರು ನೀನಾಗಿ
ಈ ಬಾಳ ಬಂಡಿಯ
ಜೋಡಿಗಳು ನಾವು
ಸರಸ ಸಲ್ಲಾಪಗಳು
ವಿರಹ ನೋವುಗಳು
ಸಾಗಿತ್ತು ಬಾಳೆಲ್ಲ
ಕೆಚ್ಚೆದೆಯು ಗಾಲಿಯಾಗಿಲ್ಲಿ
ನನ್ನ ನೋವಿನ ಕಂತೆ
ನಿನ್ನ ಬೇನೆಯ ಸಂತೆ
ಕರಗಿ ಹೋದುವು ಇಲ್ಲಿ
ನವನೀತದಂತೆ ॥



# ನನ್ನ ನಡಿಗೆ

ನಾನು ಒಮ್ಮೊಮ್ಮೆ ನೆಲದ ಮೇಲೆ
ಇನ್ನೊಮ್ಮೆ ನೀರಿನಲ್ಲಿ ಮತ್ತೊಮ್ಮೆ ಗಾಳಿಯಲ್ಲಿ
ನಡೆಯುತ್ತಾ ಸಾಗುತ್ತೇನೆ, ದಾರಿಯನ್ನು ಸವೆಸುತ್ತೇನೆ.

ನೆಲದ ಮೇಲೆ ನಡೆಯುವಾಗ ಆಧಾರವಿದೆಯನ್ನಿಸುತ್ತದೆ
ಕಂಪನು ಮೂಸುತ್ತೇನೆ, ಸೌಂಧರ್ಯ ಮೆಚ್ಚುತ್ತೇನೆ
ಕೆಲವೊಮ್ಮೆ ಮುಳ್ಳುಗಳನ್ನು ಮೆಟ್ಟುತ್ತೇನೆ ಕಾಲುಗಳಲ್ಲಿ
ಚುಚ್ಚಿ ರಕ್ತ ಚೆಲ್ಲುತ್ತದೆ. ನೋವಿನಲಿ ಮುಳುಗುತ್ತೇನೆ
ಮತ್ತೊಮ್ಮೆ ಕೆಸರಿನಲ್ಲಿ ಬೀಳುತ್ತೇನೆ. ಕೊಳಕಾಗುತ್ತೇನೆ,
ಹೊಲಸು ನಾತಗಳು ಮೂಗು ಮುಚ್ಚುತ್ತೇನೆ ನಡೆಯುತ್ತೇನೆ

ದಾರಿಗಡ್ಡದ ಬೇಲಿಗಳ ದಾಟುತ್ತೇನೆ, ಕಂದರಗಳಲ್ಲಿ
ಇಳಿಯುತ್ತೇನೆ.
ಪರ್ವತಗಳನ್ನೇರುತ್ತೇನೆ, ಕಾಡುಗಳನ್ನು ಹೊಗುತ್ತೇನೆ,
ಹೆದರುತ್ತೇನೆ
ಕಾಡು ಪ್ರಾಣಿಗಳನ್ನು, ನಾಡ ಪ್ರಾಣಿಗಳನ್ನು ಕಾಣುತ್ತಲೇ
ಇರುತ್ತೇನೆ,
ಪ್ರಾಚೀನ ಕಾಲದ ಗುಹೆಗಳು, ಅವಶೇಷಗಳು, ದೇವಾಲಯಲ್ಲಿ
ಮರಗಳು,
ಸಮಾಧಿಯಿಂದ ಜಿಗಿದೆದ್ದ ಗೋರಿಗಳು, ಸುತ್ತಲೂ
ಹರಿದಾಡುವ ಹಾವುಗಳು
ಎಲ್ಲವನ್ನೂ ಮೆಟ್ಟಿ ನಡೆಯುತ್ತೇನೆ. ಈ ನೆಲದಲ್ಲಿ
ಆಧಾರಸ್ಥಂಭದಲ್ಲಿ

ಚಳಿಯಲ್ಲಿ ನೀರಿಗಿಳಿಯುತ್ತೇನೆ, ಮುಳುಗಿ ತೇಲುತ್ತೇನೆ
ಮೈನಡುಗುತ್ತದೆ ಮುಳುಗುವಾಗೊಮ್ಮೆ, ಹಲ್ಲುಕಡಿಯುತ್ತೇನೆ
ಮೈನವಿರೇಳುತ್ತದೆ ನಡುಕ ಬಂದಾಗೊಮ್ಮೆ, ಆದರೂ
ನಡೆಯುತ್ತೇನೆ
ಕಾಣುತ್ತೇನೆ ಮೀನುಗಳ ರಾಶಿ, ಚಿಪ್ಪುಗಳ ಮಾಲೆ, ಮುತ್ತುಗಳ
ಸಾಲು
ಹವಳದಿಬ್ಬಗಳು, ರತ್ನ ಗರ್ಭಗಳು, ರಾಶಿ ರಾಶಿಯಲ್ಲಿ, ಆಸೆ
ಚಿಗುರುಗಳಲ್ಲಿ
ಮುಳುಗಿ, ಮುಳುಗಿ ತರುತ್ತೇನೆ ಬೊಗಸೆ ಬೊಗಸೆಯಲ್ಲಿ
ಮುತ್ತು ರತ್ನಗಳಲ್ಲ, ಬರೆ ಮರಳು, ಕಲ್ಲು ಚಿಪ್ಪುಗಳನ್ನು
ಗರ್ಭವತಿ ಜಲಧಿ, ಬಚ್ಚಿಟ್ಟಿದ್ದಾಳೆ, ತನ್ನೊಡಲಿನಲ್ಲಿ ರಾಶಿಗಳಲ್ಲಿ
ಮೊಗೆಯುತ್ತೇನೆ ನಾನು ಬೊಗಸೆಯಲ್ಲಿ ನೀರನೆಲ್ಲಾ ಆಕೆಯಲ್ಲಿ
ಆಗಾದರೂ ದೊರಕೀತು ಅಮೂಲ್ಯದೊಡವೆರಾಶಿಯೆಂದು

ಈಗ ಗಾಳಿಯಲ್ಲಿ ತೇಲಲು ಹೊರಟಿದ್ದೇನೆ ಮುಂದಕ್ಕೆ
ಇಲ್ಲಿ ಕಾಲುಗಳು ಬೇಕಾಗಿಲ್ಲ, ಮೈಯಲ್ಲಿ ಭಾರವೇಇಲ್ಲ.
ಎತ್ತೆತ್ತ ನೋಡಿದರೂ ಬರಿಶೂನ್ಯ, ಸೊನ್ನೆಗಳ ರಾಶಿ
ಚೇತನವೆ ಇಲ್ಲಿಲ್ಲ, ಸೋತು ಹೋಗುತ್ತಿದ್ದೇನೆ.
ಶೂನ್ಯವಾಗುತ್ತಿದ್ದೇನೆ,
ಕತ್ತೆತ್ತಿ ನೋಡಿದಾಗ ಸೂರ್ಯ ಚಂದ್ರರು, ನಕ್ಷತ್ರಗಳು
ಮಿನುಗುತ್ತಿವೆ, ನಡೆಯುತ್ತೇನೆ, ನಾನು ಆ ಬೆಳಕಿನೆಡೆಗೆ,
ನಾನೆಂಬುದನು ಕಳಚಿ ಹಾರಿ ಹೋಗುತ್ತೇನೆ.





# ಹೆಸರಿಡದ ಕವನ ಸಂಕಲನ

(ಬಿ) ಡಾ.ಸಬಿತಾ ಮರಕಿಣಿಯವರು ತಮ್ಮ ಪತಿ ಡಾ.ಎಂ.ಬಿ.ಮರಕಿಣಿಯವರೊಂದಿಗೆ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕವಾಗಿ ಮಾಡಿದ ಸೇವೆಯನ್ನು ಸಮಗ್ರ ಕನ್ನಡನಾಡು ಈಗಾಗಲೇ ಗುರುತಿಸಿದೆ. ಅವರದ್ದು ಹತ್ತೂರುಸುತ್ತಿದ, ಹತ್ತಾರು ನೋವು ನಲಿವುಗಳನ್ನು ಅನುಭವಿಸಿದ ವಿವಿಧ ಸ್ತರಗಳ ಜನರನ್ನ ಹತ್ತಿರದಿಂದ ಕಂಡು ಪ್ರತಿಸ್ಪಂದಿಸುತ್ತಾ, ಸಾಹಿತ್ಯದಲ್ಲಿ ದಾಖಲಿಸುತ್ತಾ ಬಂದ ಅಪರೂಪದ ಕುಟುಂಬದ ಬದುಕು.

1999ರಲ್ಲಿ ಡಾ.ಸಬಿತಾ ಮರಕಿಣಿಯವರ ಹೆಸರಿಡದ ಕವನ ಸಂಕಲನ ವೆಂಬ ಮೊಸಲ ಸಂಕಲನವು ಪ್ರಕಟವಾಗಿದ್ದು, ಪ್ರಕೃತಿ ಅವರ ಎಲ್ಲಾ ರಚನೆಗಳಿಂದ ಆಯ್ದ ಕವನಗಳನ್ನು ಸಂಕಲಿಸಿ ಸದೇ ಹೆಸರಿನಿಂದ ಪ್ರಕಟವಾಗುತ್ತಿದೆ. ಅವರು ವೃತ್ತಿಯಿಂದ ವೈದ್ಯೆ, ಪ್ರವೃತ್ತಿಯಿಂದ ಸಮಾಜ ಸೇವಾಕರ್ತೆ, ಹವ್ಯಾಸದಿಂದ ಬರಹಗಾರ್ತಿ; ಅವರ ಅಭಿವ್ಯಕ್ತಿ ಮಾಧ್ಯಮ ಕತೆ, ಕಾದಂಬರಿ ಹಾಗೂ ಕವಿತಾ ರಚನೆ.

ಇಂಥಾ ಬಹುಮುಖ ಚಟುವಟಿಕೆಗಳಿಂದ ಒದಗಿದ ಅನುಭವಗಳಿಗೆ ಸೂಕ್ಷ್ಮ ಪ್ರತಿ ಸ್ಪಂದನೆಗಳಾಗಿ ಅವರ ಅಭಿವ್ಯಕ್ತಿಗಳು; ಹೇಳ ಬೇಕಾಗಿರುವುದನ್ನು ಹೇಳಿಯೇ ಬಿಡುವ ಸಹಜತೆ ಅವರ ರಕ್ತಗುಣ, ಇಲ್ಲೆಲ್ಲ ನೋವು, ಸಿಟ್ಟು, ನಲಿವು, ಬದುಕಿನ ಬಗೆಗಿನ ಗಾಢವಾದ ಪ್ರೀತಿ, ಕಾಳಜಿ, ಪ್ರಕೃತಿ ಪ್ರೇಮ, ಇತ್ಯಾದಿಗಳಾಗಿ ಹೊಮ್ಮಿದೆ. ಈ ಸಮಗ್ರ (ಆಯ್ದ) ಸಂಕಲನವು ಅವರ ಬದುಕಿನ ಸಮಗ್ರ ಕೈಗನ್ನಡಿ; ಇಲ್ಲಿ ನವೋದಯವಿದೆ, ನವ್ಯವಿದೆ, ಬಂಡಾಯ ವೂ ಇದೆ – ಎಲ್ಲವೂ ಕಾವ್ಯವಾಗಿ ಹೊರ ಹೊಮ್ಮಿ ಸಹಜ ಕವಿ ಹೃದಯವು ಅನಾವರಣ ಗೊಂಡಿದೆ.

ಇಲ್ಲಿ ಸರಳತೆಗೇ ಪ್ರಾಧಾನ್ಯ, ಆದರೂ ಸೌಂದರ್ಯದ ಬೇರೆ ಬೇರೆ ಸ್ತರಗಳನ್ನು ವ್ಯಾಪಿಸಿಕೊಂಡಿದೆ, ಏನಿದ್ದರೂ ಕಾವ್ಯಶಿಲ್ಪದ ಕೌಶಲ್ಯ, ಕುಸುರಿ ಕೆಲಸಗಳಿಗಿಂತ ಅನುಭವ – ಅನಿಸಿಕೆಗಳನ್ನು ಇದ್ದಕ್ಕಿದ್ದಂತೆಯೇ ಹೇಳಿ ಹಗುರಾಗುವುದು ಅವರ ಕಾವ್ಯಗುಣವಾಗಿ ಕಾಣಿಸುತ್ತದೆ. ಅಂತರಂಗದ ತುಮುಲಗಳನ್ನು ಬಿಂಬಿಸುವ ಬೇರೆ ಬೇರೆ ರೂಪಗಳು ಸಾರುವುದು ಮಾನವ ಬದುಕಿನ ಒಟ್ಟು ಸಾರವೇನೆಂಬುದನ್ನು; ಇದು ಅವರ ಸ್ವಂತ ಬದುಕಿನ ಫಿಲಾಸಫಿಯೂ ಆಣುತ್ತದೆ.

**ಡಾ.ಹರಿಕೃಷ್ಣ ಭರಣ್ಯ**
ವಿಶ್ರಾಂತ ಕನ್ನಡ ಪ್ರಾಧ್ಯಾಪಕ
'ಬನಶಂಕರಿ' ನಾರಾಯಣ ಮಂಗಲ
ಅಂಚೆ ಕುಂಬಳೆ – 671321
ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ

**ಸೃಜನ ಪ್ರಕಾಶನ,**
ನಂ. 893/ಡಿ, 3ನೇ ಕ್ರಾಸ್,
ಪೂರ್ವ ಬಡಾವಣೆ ನೆಹರು ನಗರ
ಮಂಡ್ಯ